ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ 5 ರನ್ವಯ ಆಯೋಗದಿಂದ ಉಲ್ಲೇಖ (2) ರಂತೆ ದಿನಾಂಕ: **15.05.2006** ರ ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದ್ದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ 173(49) ಟಿಜಡ್‌ಪಿ 2007, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2007**

ಮೇಲೆ ವಿವರಿಸಿರುವಂತೆ **ಬೆಳಗಾವಿ ಜಿಲ್ಲೆ ರಾಯಬಾಗ ತಾಲ್ಲೂಕು ಪಂಚಾಯತಿ ಸದಸ್ಯ ಸ್ಥಾನಕ್ಕೆ ಶಿರಗೂರ–2** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005 ರಲ್ಲಿ ಸ್ಪರ್ಧಿಸಿದ್ದ **ಶ್ರೀಮತಿ ಮಾರುಫ ನಸೀಮಾ ಮಮತಾಜಿ** ಇವರು, ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು,**

ಪಿ.ಆರ್.1142 **ರಾಜ್ಯ ಚುನಾವಣಾ ಆಯೋಗ.**

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಕೆಗಳು**

**ವಿಷಯ:** ಸಮಾಪನೆಗೊಂಡಿರುವ ಬಡಗಿ ಮತ್ತು ಕಮ್ಮಾರರ ಸಹಕಾರ ಸಂಘ ನಿ., ದಾವಣಗೆರೆ ಇದರ ನೋಂದಣಿಯನ್ನು ರದ್ದು ಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಸಮಸಂಖ್ಯೆ ಆದೇಶ ದಿನಾಂಕ: 14.03.2007.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ: 16.06.2007.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ಆದೇಶ ಸಂಖ್ಯೆ: ಎಆರ್‌ಸಿ/417/ ದಿನಾಂಕ: 04.12.1964 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರ ಮೂಲಕ ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರೂ ಸಹ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಆರ್:ಡಿವಿಜಿ:ಎಲ್‌ಕ್ಯೂಡಿ:ಸಿಆರ್–46:2006–07, ದಿನಾಂಕ: 21ನೇ ಜುಲೈ 2007**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎ:2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಬಡಗಿ ಮತ್ತು ಕಮ್ಮಾರರ ಸಹಕಾರ ಸಂಘ ನಿ., ದಾವಣಗೆರೆ, ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿಲ್ಲರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರ ಕಛೇರಿಗೆ ನೇಮಿಸಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 21.07.2007 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.1082

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ**

**ವಿಷಯ:** ಸಮಾಪನೆಯಲ್ಲಿರುವ ಯರಬಳ್ಳಿ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ., ಯರಬಳ್ಳಿ ಹಿರಿಯೂರು ತಾಲ್ಲೂಕು ಇದನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರ ಸಂಖ್ಯೆ: ಸನಿ:30:ಸಮಾಪನೆ:ಸಿಆರ್:1:2007–08/407, ದಿನಾಂಕ: 18.05.2007.

2) ಈ ಕಛೇರಿಯ ಸಮ ಸಂಖ್ಯೆ: ಆದೇಶ ದಿನಾಂಕ: 15.09.1998.

**ಪ್ರಸ್ತಾವನೆ:**

ಯರಬಳ್ಳಿ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ., ಹಿರಿಯೂರು ತಾಲ್ಲೂಕು ಇದು ದಿನಾಂಕ: 12.10.1982 ರಂದು ನೋಂದಣಿಯಾಗಿದ್ದು ಅನೇಕ ವರ್ಷಗಳ ಕಾಲ ಕಾರ್ಯ ಸ್ಥಗಿತಗೊಂಡಿದ್ದರಿಂದ ಉಲ್ಲೇಖ (2) ಈ ಕಛೇರಿಯ ಆದೇಶದಂತೆ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಹಿರಿಯೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದ್ದಿತು.

ದಿನಾಂಕ: 12.04.2007 ರಂದು ಸಂಘದ ಸದಸ್ಯರು ಸರ್ವ ಸಭೆ ನಡೆಸಿ ಚಿತ್ರದುರ್ಗದಲ್ಲಿ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘಗಳ ಒಕ್ಕೂಟ ಸ್ಥಾಪನೆಯಾಗಿದ್ದು, ಎಣ್ಣೆ ಬೀಜ ಸಂಗ್ರಹಿಸಿ ಸರಬರಾಜು ಮಾಡುವ ಅವಕಾಶವಾಗಿರುವುದರಿಂದ ಸಂಘವನ್ನು ಪುನಃಶ್ಚೇತನಗೊಳಿಸಲು ಕಾರ್ಯಕ್ರಮರೂಪಿಸಿ ಪುನಃಶ್ಚೇತನ ಆದೇಶ ನೀಡುವಂತೆ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನ ಕೈಗೊಂಡಿರುತ್ತಾರೆ ಎಂದು ಸಹಾಯಕ ನಿಬಂದಕರು, ಉಲ್ಲೇಖ (1)ರ ಪತ್ರದಲ್ಲಿ ವಿವರಿಸುತ್ತಾ ಸದರಿ ಸಂಘದ ಸಮಾಪನಾ ಆದೇಶವನ್ನು ಹಿಂಪಡೆದು ಕೊಳ್ಳಲು ಮನವಿ ಮಾಡಿರುತ್ತಾರೆ. ಅಂತೆಯೇ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್–5:1998–99, ದಿನಾಂಕ: 30ನೇ ಜೂನ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:243:ಸಿಎಲ್‌ಎಂ:01, ದಿನಾಂಕ: 21.11.2001 ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಟಿ.ಓ. ಸುನಂದಮ್ಮ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಹಿರಿಯೂರು ತಾಲ್ಲೂಕು ಯರಬಳ್ಳಿ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ, ಯರಬಳ್ಳಿ ಇದನ್ನು ಉಲ್ಲೇಖ (2)ರ ಮೇರೆಗೆ ಆದೇಶಿಸಲಾದ ಸಮಾಪನಾ ಆದೇಶವನ್ನು ರದ್ದುಪಡಿಸಿ ಸಂಘದ ಪುನಃಶ್ಚೇತನಕ್ಕೆ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಆದೇಶಿಸಿರುತ್ತೇನೆ.

ಷರತ್ತುಗಳು:

1. ಸಂಘದ ದಿನಾಂಕ: 12.04.2007ರ ಸರ್ವ ಸದಸ್ಯರ ಸಭೆಯಲ್ಲಿ ರೂಪಿಸಿರುವ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸತಕ್ಕದ್ದು.
2. ಸಮಾಪನಾಧಿಕಾರಿಗಳು ಸಂಘದ ಸರ್ವ ಸದಸ್ಯರ ಸಭೆ ಕರೆದು ನೂತನ ಆಡಳಿತ ಮಂಡಳಿಯನ್ನು ಪುನರ್ ರಚಿಸತಕ್ಕದ್ದು. ಆಡಳಿತ ಮಂಡಳಿ ರಚನೆಗೆ ಕಾಯ್ದೆ ಕಲಂ 14ರ ಪ್ರಕಾರ ಚುನಾವಣೆ ನಡೆಸಲು ಸಹಕಾರ ಅಭಿವೃದ್ಧಿ ಅಧಿಕಾರಿ ಹಿರಿಯೂರು ಇವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಿಸಿದ್ದು, ಆಡಳಿತ ಮಂಡಳಿ ರಚನೆಯ ವರದಿಯನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 30.06.2007 ರಂದು ನನ್ನ ಸ್ವ ಹಸ್ತ ಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಲಾಗಿರುತ್ತದೆ.

ಸಹಕಾರ ಸಂಘಗಳ ಉಪನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್.1084

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ನಂ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–13/2005–06, ದಿನಾಂಕ: 21ನೇ ಜುಲೈ 2007**

**ವಿಷಯ:** ಸ್ಥಗಿತಗೊಂಡಿರುವ ಶ್ರೀ ಜಯಲಕ್ಷ್ಮೀ ಕಮರ್ಷಿಯಲ್ ಕ್ರೆಡಿಟ್ ಕೋ–ಆಪ್ ಸೊಸೈಟಿ ನಿ, ದಾವಣಗೆರೆ ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪ್ರಸ್ತಾವನೆ ದಿನಾಂಕ: 10.08.2005 ಮತ್ತು ದಿನಾಂಕ: 08.06.2007.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯಚಟುವಟಿಕೆಗಳು ಹಲವು ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಸಂಘದ ಆಡಳಿತ ಮಂಡಳಿ ನಿರ್ದೇಶಕರ : ಕಾರ್ಯದರ್ಶಿಯವರ ಮಾಹಿತಿ ಲಭ್ಯವಿರುವುದಿಲ್ಲ ಹಾಗೂ ಲೆಕ್ಕ ಪುಸ್ತಕಗಳು, ಲೆಕ್ಕ ಪರಿಶೋಧನಾ ವರದಿಗಳು ಲಭ್ಯವಿರುವುದಿಲ್ಲ. ಹಾಗೂ ದಿನಾಂಕ: 05.09.2005ರ ಈ ಕಛೇರಿಯ ಕಾರಣ ಕೇಳಿ ನೋಟೀಸ್‌ಗಳಿಗೆ ಯಾರಿಂದಲೂ ಪ್ರತಿಕ್ರಿಯೆ ಬಾರದೇ ಇರುವ ಕಾರಣ ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಬಿ.ಕುಬೇರಪ್ಪ ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಶ್ರೀ ಜಯಲಕ್ಷ್ಮೀ ಕಮರ್ಷಿಯಲ್ ಕ್ರೆಡಿಟ್ ಕೋ-ಆಪ್ ಸೊಸೈಟಿ ನಿ., ದಾವಣಗೆರೆ ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ರನ್ವಯ **ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ, ದಾವಣಗೆರೆ** ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 21.07.2007 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.1083

**ಪಶುಸಂಗೋಪಣೆ ಮತ್ತು ಮೀನುಗಾರಿಕೆ ಇಲಾಖೆ**

**ಅಧಿಸೂಚನೆ ಸಂಖ್ಯೆ: ಪಸಂಮೀ 12 ಮೀಇಇ 2007, ಬೆಂಗಳೂರು, ದಿನಾಂಕ: 30ನೇ ಜುಲೈ 2007**

ಮೀನುಗಾರಿಕೆಯಲ್ಲಿ ತೊಡಗಿಸಿಕೊಂಡಿರುವವರ, ಅದರಲ್ಲೂ, ವಿಶೇಷವಾಗಿ, ಸಾಂಪ್ರದಾಯಿಕ ದೋಣಿಯನ್ನು ಉಪಯೋಗಿಸಿ ಮೀನುಗಾರಿಕೆ ಕೈಗೊಳ್ಳುವವರ ಹಿತಾಸಕ್ತಿಯನ್ನು ಕಾಪಾಡಲು ಮತ್ಸ್ಯ ಸಂಪತ್ತನ್ನು ಸಂರಕ್ಷಿಸುವ ಅವಶ್ಯಕತೆಯಿರುವುದೆಂದು ಕರ್ನಾಟಕ ಸರ್ಕಾರವು ಮನಗಂಡಿರುವ ಕಾರಣದಿಂದಾಗಿ;

ಮೀನುಗಾರಿಕೆ ಸಂಪತ್ತನ್ನು ಸಂರಕ್ಷಿಸುವ ಅವಶ್ಯಕತೆಯಿರುವುದರಿಂದ, ವೈಜ್ಞಾನಿಕ ರೀತಿಯಲ್ಲಿ ಮೀನುಗಾರಿಕೆ ಕೈಗೊಳ್ಳಲು ನಿಯಂತ್ರಿಸಬೇಕಾಗಿರುವುದಲ್ಲದೆ ಮೇಲಾಗಿ ಕಡಲಿನಲ್ಲಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ಅವಶ್ಯಕತೆ ಇದೆಯೆಂಬ ಕಾರಣದಿಂದಾಗಿ;

ಕಡಲಲ್ಲಿ ವಾತಾವರಣದ ವೈಪರೀತ್ಯದಿಂದಾಗಿ ಮೀನುಗಾರರ ಜೀವಕ್ಕೆ ಮತ್ತು ಆಸ್ತಿಗಳಿಗೆ ಸಂಭವಿಸುವ ಅಪಘಾತಗಳಿಂದ ಉಂಟಾಗಬಹುದಾದ ನಷ್ಟವನ್ನು ತಪ್ಪಿಸಬೇಕೆಂಬ ಕಾರಣದಿಂದಾಗಿ;

ಭಾರತದ ಮಾನ್ಯ ಸರ್ವೋಚ್ಚ ನ್ಯಾಯಾಲಯವು ರಿಟ್ ಮೊಕದ್ದಮೆ ಸಂಖ್ಯೆ: 393/2005 ರಲ್ಲಿ ದಿನಾಂಕ: 17.05.2007 ರಂದು ನೀಡಿರುವ ಆದೇಶದಲ್ಲಿ ಭಾರತ ಸರ್ಕಾರದ ದಿನಾಂಕ: 10.04.2007ರ ಅಧಿಸೂಚನೆಯಲ್ಲಿನಂತೆ ನಿಷೇಧಿತ ಅವಧಿಯ ಕೊನೆಯ ದಿನಾಂಕವನ್ನು ದಿನಾಂಕ: 31.07.2007ಕ್ಕೆ ನಿಗದಿಪಡಿಸಿ ಆದೇಶಿಸಿರುವ ಕಾರಣದಿಂದಾಗಿ;

ಕರ್ನಾಟಕ ಕರಾವಳಿ ಮೀನುಗಾರಿಕೆ (ನಿಯಂತ್ರಣ) ಕಾಯಿದೆ 1986ರ ನಿಯಮ 3ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ದಿಸೆಯಲ್ಲಿ ಈ ಹಿಂದೆ ಹೊರಡಿಸಲಾಗಿದ್ದ ಅಧಿಸೂಚನೆಗಳ ಸಂಖ್ಯೆ: ಪಸಂಮೀ/98/ಮೀಇಇ/2006, ದಿನಾಂಕ: 28.07.2006ನ್ನು ರದ್ದುಗೊಳಿಸಿ ಕರ್ನಾಟಕದ ಕರಾವಳಿಯಲ್ಲಿ ಯಾವುದೇ ಬಲೆಗಳನ್ನು/ಸಾಧನಗಳನ್ನು ಉಪಯೋಗಿಸಿ ಮೀನುಗಾರಿಕೆಗಾಗಿ ಯಾಂತ್ರೀಕ ದೋಣಿಗಳ ಬಳಕೆಯನ್ನು ಮುಂದಿನ ಆದೇಶದವರೆಗೆ ಕೆಳಕಂಡಂತೆ ನಿಷೇಧಿಸಿದೆ.

ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ನಿಷೇಧಿತ ಅವಧಿಯು ಜೂನ್ 15 ರಿಂದ ಪ್ರಾರಂಭಗೊಂಡು ಆಗಸ್ಟ್ 10 ರವರೆಗೆ (ಎರಡು ದಿನಗಳು ಸೇರಿ) ಪ್ರತಿವರ್ಷ ಒಟ್ಟು 57 ದಿವಸಗಳ ಅವಧಿಗೆ ಜಾರಿಯಲ್ಲಿರುತ್ತದೆ. ಆದಾಗ್ಯೂ, ಈ ಎರಡು ಜಿಲ್ಲೆಗಳಲ್ಲಿನ ಸದರಿ ನಿಷೇಧಿತ ಅವಧಿಯಲ್ಲಿ ಆಳ ಸಮುದ್ರದ ಬಹುದಿನಗಳ ಮೀನುಗಾರಿಕೆ ದೋಣಿಗಳು (ಮಲ್ಟಿಡೇ ಡೀಪ್ ಸೀ ಟ್ರಾಲರ್ಸ್) ಆಗಸ್ಟ್ 3 ರಿಂದ ಕರಾವಳಿ ಮೀನುಗಾರಿಕೆಗಾಗಿ ತೆರಳಲು ಸದರಿ ದೋಣಿಗಳು ಹಿಡಿದ ಮೀನನ್ನು ಇಳಿಸಲು ಆಗಸ್ಟ್ 10ರ ನಂತರವೇ ಬಂದರುಗಳಿಗೆ ಹಿಂದಿರುಗತಕ್ಕದ್ದೆಂಬ ನಿಬಂಧನೆಯ ಮೇರೆಗೆ ಅನುಮತಿಸಲಾಗಿದೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ನಿಷೇಧಿತ ಅವಧಿಯು ಜೂನ್ 15 ರಿಂದ ಪ್ರಾರಂಭಗೊಂಡು ಜುಲೈ 31ರ ವರೆಗೆ (ಎರಡು ದಿನಗಳು ಸೇರಿ) ಪ್ರತಿವರ್ಷ ಒಟ್ಟು 47 ದಿವಸಗಳ ಅವಧಿಗೆ ಜಾರಿಯಲ್ಲಿರುತ್ತದೆ.

ಆದಾಗ್ಯೂ, ಮೇಲ್ಕಾಣಿಸಿದ ನಿಷೇಧಿತ ಅವಧಿಗಳಲ್ಲಿ ಕರ್ನಾಟಕದ ಎಲ್ಲಾ 3 ಕರಾವಳಿ ಜಿಲ್ಲೆಗಳಲ್ಲಿ ಕೇವಲ ದೋಣಿಯನ್ನು ಸಾಗಿಸುವ ಉದ್ದೇಶಕ್ಕಾಗಿಯೇ 10 ಅಶ್ವಶಕ್ತಿಯವರೆಗಿನ ಸಾಮರ್ಥ್ಯದ ಐ.ಬಿ.ಎಂ. ಅಥವಾ ಓ.ಬಿ.ಎಂ. ಯಂತ್ರವನ್ನು ಅಳವಡಿಸಿದ ಅಥವಾ ಅಳವಡಿಸದಿರುವ ಸಾಂಪ್ರದಾಯಿಕ ಮೀನುಗಾರಿಕೆ ದೋಣಿಗಳು ಕರಾವಳಿ ಮೀನುಗಾರಿಕೆಯನ್ನು ಕೈಗೊಳ್ಳಲು ಅನುಮತಿಸಿದೆ.

ಸರ್ಕಾರದ ಈ ಆದೇಶವನ್ನು ಉಲ್ಲಂಘಿಸುವ ಮೀನುಗಾರಿಕೆ ದೋಣಿಗಳು ಮತ್ತು ಮೀನುಗಾರರು ಮೇಲ್ಕಾಣಿಸಿದ ಕಾಯಿದೆಯಲ್ಲಿ ವಿಧಿಸಲಾಗಿರುವ ದಂಡನೆಗಳಿಗೆ ಹೊಣೆಯಾಗುವುದಲ್ಲದೆ ಒಂದು ವರ್ಷದ ಅವಧಿಗೆ ರಾಜ್ಯ ಮಾರಾಟಕರ ರಹಿತ ಡೀಸೆಲ್ ಪಡೆಯಲು ಮತ್ತು ಕೇಂದ್ರ ಅಬ್ಕಾರಿ ತೆರಿಗೆಯ ಮರುಪಾವತಿಯನ್ನು ಪಡೆಯಲು ಅನರ್ಹರಾಗುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕೆ. ಶ್ರೀನಿವಾಸ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.

## ANIMAL HUSBANDRY & FISHERIES DEPARTMENT

**NOTIFICATION No. AHF 12 SFM 2007, BANGALORE, DATED: 30th JULY 2007**

WHEREAS, the Government of Karnataka are convinced of the need to conserve fishery wealth and thereby to protect the interest of persons engaged in fishing, particularly those engaged in fishing using traditional fishing crafts;

AND WHEREAS, it is necessary to conserve the fishery wealth and regulate fishing on a scientific basis and it is also imperative to maintain Law and Order situation in the offi-shore.

AND WHEREAS, there is a need to avoid loss of fishermen lives and their properties due to accident in the sea during squally weather conditions.

AND WHEREAS, the Hon'ble Supreme Court of India in its order dated: 17.05.2007 in W.P.(C) No.393/2005 has ordered that the outer limit of the ban will be upto 31.07.2007 in accordance with Government of India Notification dated: 10.04.2007.

NOW, THEREFORE, in exercise of the powers conferred under section 3 of the Karnataka Marine Fishing (Regulation) Act, 1986 and in supersession of the earlier Notification No: AHF/98/SFM/2006, dated: 28.07.2006, the Government of Karnataka hereby prohibits, until further orders, the operation of mechanised boats for fishing in any kind of nets/gears in the coasts of Karnataka as follows:-

In Dakshina Kannada and Udupi Districts the ban period will be in force for a period of 57 days from 15th June to 10th August (both days inclusive) of every year. However, during this ban period in the above two districts, multi-day deep sea trawlers are permitted for sea-fishing from 3rd August with a condition that they should return to harbours only after 10th August for unloading the fish catch.

In the Uttara Kannada District the ban period will be in force for a period of 47 days from 15th June to 31st July (both days inclusive) of every year;

However, during the respective ban periods in all the 3 coastal districts of Karnataka, only the traditional fishing crafts without motor or fitted with a motor of the capacity of upto 10 H.P. I.B.M. or O.B.M. for propulsion purpose only are permitted for sea-fishing.

The fishing vessels and fishermen who violate the above orders of Government will be liable for penalties as prescribed in the above Act and they will also become ineligible for getting the benefits of State Sales Tax exempt diesel and also refund of Central Excise Duty for a period of one year.

By order and in the name of the Governor of Karnataka,

P.R.1086

**B.K. SRINIVASA MURTHY**

Under Secretary to Government,

Animal Husbandry & Fisheries Department.

**URBAN DEVELOPMENT DEPARTMENT**

**NOTIFICATION NO. UDD 145 MNX 2003, Bangalore, Dated: 30th August 2007**

In exercise of the powers conferred by sub-section (1) of Section-48 of the Land Acquisition Act-1894 (Central Act-1894) the Government of Karnataka hereby withdraw from acquisition the lands specified below in respect of which the Preliminary Notification was published in the Karnataka Gazette dated: 20.03.2001 in Part-III at pages from 1041 to 1098 vide Notification No. BDA/SALAO/C4/PR/638/2000-01, dated: 17.03.2001 and Final Notification No. UDD 10 MNX 2002, dated: 04.03.2002 was published in the Karnataka Gazette dated: 21.03.2002 Sub-section (1) of Section-19 of BDA Act 1976 (Karnataka Act-12 of 1976) for formation of layout Called "FURTHER EXTENSION OF ANJANAPURA LAYOUT".

**SCHEDULE**

**DISTRICT: BANGALORE TALUK: BANGALORE SOUTH HOBLI: UTTARAHALLI VILLAGE: GOTTIGERE**

| Sl. No. | Name of the Khatedar/ Anubhavadar | Sy. No. | Dry/Wet/ Garden | Total Extent | Kharab | Remaining Extent | Assess ment | Extent Acquired | Extent with drawn | East Sy.No. | West Sy.No. | North Sy.No. | South Sy.No. |
|---|---|---|---|---|---|---|---|---|---|---|---|---|---|
| | **Sri/Smt.** | | | A-G | A-G | A-G | Rs.Ps. | A-G | A-G | | | | |
| 01 | B.Shanthakumari W/o G.N.Nanjundappa | 126 | Dry | 4-05 | - | 4-05 | 6-07 | 4-05 | 4-05 | 127 | 125 | Oni | 127 |
| 02 | B.Shanthakumari W/o Nanjundappa | 127/1 | Dry | 1-05 | 0-02 | 1-03 | 1-71 | 1-05 | 1-05 | 128 | 127/2 | Oni | 127/4 |
| 03 | B.Shanthakumari W/o G.N.Nanjundappa | 127/2 | Dry | 1-19 | 0-01 | 1-18 | 2-30 | 1-19 | 1-19 | 127/1 | 126 | Oni | 27/4 |

**TOTAL EXTENT WITH DRAWN 06 ACRES 29 GUNTAS (Six Acres and Twenty Nine Guntas only)**

By Order and in the name of the Governor of Karnataka,

**M.S. PREMACHANDRA**

Under Secretary to Government, Urban Development Department.

P.R.1147

**URBAN DEVELOPMENT DEPARTMENT**

**NOTIFICATION NO. UDD 178 MNX 2006, Bangalore, Dated: 30th August 2007**

In exercise of the powers conferred by sub-section (1) of Section-48 of the Land Acquisition Act-1894 (Central Act-1894) the Government of Karnataka hereby withdraw from acquisition the lands specified below in respect of which the Preliminary Notification was published in the Karnataka Gazette dated: 21.11.2002 in of Part-3 at pages from 2199 to 2244 vide Notification No. BDA/SLAO/A4/PR/192/02-03, dated: 07.11.2002 and Final Notification No.UDD 750 MNX 2003 dated: 09.09.2003 was published in the karnataka Gazette dated: 10.09.2003 under Sub-section (1) of Section-19 of BDA Act 1976 (Karnataka Act-12 of 1976) for formation of layout Called "FURTHER EXTENSION OF BANASHANKARI VIth STAGE LAYOUT".

**SCHEDULE**

**DISTRICT: BANGALORE TALUK: SOUTH HOBLI: UTTARAHALLI & KENGERI VILLAGE: GUBBALALU**

| Sl. No. | Name of the Khatedar/ Anubhavadar | Sy. No. | Dry/Wet/ Garden | Total Extent | Kharab | Remaining Extent | Assess ment | Extent Acquired | Extent with drawn | East Sy.No. | West Sy.No. | North Sy.No. | South Sy.No. |
|---|---|---|---|---|---|---|---|---|---|---|---|---|---|
| | **Sri/Smt.** | | | A-G | A-G | A-G | Rs.Ps. | A-G | A-G | | | | |
| 01 | U.Munireddy, M.Devendra | 23(P) | Dry | 7-25 | 0-19 | 7-06 | 9-01 | 6-29 | 2-05 | Raghuvana halli Gadi | 27 | 22 | 24/1-7 |

**TOTAL EXTENT WITH DRAWN 2 ACRE AND 05 GUNTAS ONLY**

By Order and in the name of the Governor of Karnataka,

**M.S. PREMACHANDRA**

Under Secretary to Government, Urban Development Department.

P.R.1148

**COMMERCIAL TAXES DEPARTMENT**

**No. CTD/LVO-030/2007-08, Bangalore, Dated: 15th May 2007**

**IN PURSUANCE OF THE PROVISION CONTAINED IN SUB RULE (i) OF RULE 6 OF THE CST (KARNATAKA) RULES 1956, IT IS HEREBY NOTIFIED FOR GENERAL INFORMATION THAT THE DECLARATION IN "FORM-C" SHOWN BELOW IS DCLARED TO BE OBSOLETE AND INVALID.**

| Number (including Code No.) of declaration form/s lost Destroyed of stolen | Name & address of the dealer to whom declaration form/s is/are issued by the department with date of issue | Registration Certificate No. of the dealer under CST Act 1956 | The address of the dealer to whom the declaration is/are sent | Date of issue of form/s by the dealer | Whether lost/destroyed or stolen | Remarks |
|---|---|---|---|---|---|---|
| 1. TCK-R 2938152 | M/s Kavitha Enterprises, No.200/1, Chandra Bldg, Kumbarpet Main Road, Bangalore-02 | TIN 29750284440 CST No. 02184606 | M/s Gain Singh Dhingara & Sons, Delhi | 09/09/2006 | Lost in transit | Filled C Forms Rs. 7,640/- |
| 2938153 | | | M/s Marshal Sports, Meerut | 09/09/2006 | | 41,020/- |
| 2938154 | | | | 09/09/2006 | | 26,094/- |
| 2938155 | | | | 09/09/2006 | | 39,457/- |

Now, therefore, it is hereby notified that the above said declaration Form-C shall not be valid for the purpose of sub section 4 of the Section 8 of the CST Act, 1956.

Asst., Commissioner of Commercial Taxes,
(LVO)-030, Bangalore - 560 009.

P.R. 723

**ಅಧಿಕೃತ ಅಧಿಕಾರಿಗಳು ಹಾಗೂ ಅಧಿಕಾರಿ ಅಧೀಕ್ಷಕರು (ಇಐಬಿ), ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ನಂ:ಇಎಕ್ಸ್‌ಇ:ಡಿಟಿಸಿಆರ್‌ಎಂ.109:2003-04, ದಿನಾಂಕ: 18ನೇ ಮೇ 2007**

**ಉಪಸ್ಥಿತರು:** ಹೆಚ್.ಎನ್. ಆನಂದ್
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷರು,
ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ.

**ಫಿರ್ಯಾದುದಾರರು:**
ಆರಕ್ಷಕ ಉಪ ನಿರೀಕ್ಷಕರು
ಗ್ರಾಮಾಂತರ ಠಾಣೆ, ಮಡಿಕೇರಿ.

**ವಿರುದ್ಧ**

**ಆರೋಪಿಗಳು:**
1. ಅನೂಪ್ ಪಿ' ವರ್ಗೀಸ್,
   ತಂದೆ:ಮಧುಪರಂಪರೆ ಮಥಾಯಿ ವರ್ಗೀಸ್
   ತರಿರೋಡ್ ಅಂಚೆ, ಕಾಪು, ವೈಲ್ ವೀಡು,
   ವೈತ್ರಿ ತಾಲ್ಲೂಕು, ವಯನಾಡು.
2. ವಿನಯ್ ಜೋಸೆಫ್
   ತಂದೆ:ಜೋಸೆಫ್ ಥೋಮಸ್, ಕಲ್‌ಪಟ್ಟೆ,
   ವೈತ್ರಿ ತಾಲ್ಲೂಕು, ವಯನಾಡು ಜಿಲ್ಲೆ.
3. ಮೋಹನ್ ಕಲ್ಪಟ್ಟಿ
4. ಶಿವರಾನ್

ದಿನಾಂಕ: 19.9.2003 ರಂದು ಮಡಿಕೇರಿ ಗ್ರಾಮಾಂತರ ಆರಕ್ಷಕ ವೃತ್ತ ನಿರೀಕ್ಷಕರು ಕರ್ತವ್ಯದಲ್ಲಿದ್ದಾಗ ಮಡಿಕೇರಿ ಗ್ರಾಮಾಂತರ ಠಾಣೆಯ ಸರಹದ್ದಿಗೆ ಸೇರಿದ ಸಂಪಾಜೆಯ ಮೂಲಕ ಮೈಸೂರಿನಿಂದ ದಕ್ಷಿಣ ಕನ್ನಡ ಜಿಲ್ಲೆಯ ಮೂಲಕ ಕೇರಳ ರಾಜ್ಯದ ಕಡೆಗೆ ಸ್ಪಿರೀಟನ್ನು ವಾಹನದಲ್ಲಿ ಕಳ್ಳ ಸಾಗಾಣಿಕೆ ಮಾಡುತ್ತಾರೆ ಎಂದು ತಿಳಿದು ಬಂದ ಖಚಿತ ಮಾಹಿತಿಯ ಮೇರೆಗೆ ಸಂಪಾಜೆ ಠಾಣೆಗೆ ಹೋಗಿ ಪಂಚಾಯ್ತಿದಾರರನ್ನು ಬರಮಾಡಿಕೊಂಡು ಸಂಪಾಜೆ ಉಪ ಠಾಣೆಯ ಸಿಬ್ಬಂದಿಗಳೊಂದಿಗೆ ಸಂಪಾಜೆಯ ಅರಣ್ಯ ಚೆಕ್‌ಪೋಸ್ಟ್‌ನ ಹತ್ತಿರ ಸುಮಾರು 50 ಅಡಿ ದೂರದಲ್ಲಿ ಮಡಿಕೇರಿ ರಸ್ತೆಯಲ್ಲಿ ವಾಹನವನ್ನು ಚೆಕ್ ಮಾಡುತ್ತಿರುವಾಗ ದಿನಾಂಕ:19.9.2003 ರಂದು ಬೆಳಿಗ್ಗೆ 6.30 ಗಂಟೆಗೆ ಮಡಿಕೇರಿ ಕಡೆಯಿಂದ ಬರುತ್ತಿದ್ದ ವಾಹನವನ್ನು ತಡೆದು ನಿಲ್ಲಿಸಿ ವಾಹನದಲ್ಲಿದ್ದ ಚಾಲಕನಿಗೆ ವಾಹನದ ದಾಖಲಾತಿ ಪತ್ರಗಳನ್ನು ಹಾಜರುಪಡಿಸಿದ್ದು, ವಾಹನದಲ್ಲಿರುವ ಸರಕಿನ ಬಗೆಗೆ ವಿಚಾರಿಸಿದಾಗ ತರಕಾರಿ

ರೋಜೆ ಎಂದು ತಿಳಿಸಿದ ಮೇರೆಗೆ ವಾಹನದಲ್ಲಿದ್ದ ಸರಕಿನ ಬಗ್ಗೆ ವಾಹನ ಸುತ್ತಲೂ ಪರೀಕ್ಷಿಸಿದಾಗ ವಾಹನದೊಳಗೆ ಬಿಳಿಯ ಕ್ಯಾನುಗಳನ್ನು ಜೋಡಿಸಿ ಇಟ್ಟಿರುವುದನ್ನು ಕಂಡು ಬಂದ ನಂತರ ಚಾಲಕನನ್ನು ವಾಹನದಲ್ಲಿರುವ ಕ್ಯಾನುಗಳ ಬಗ್ಗೆ ಪ್ರಶ್ನಿಸಿದಾಗ ಕ್ಯಾನುಗಳಲ್ಲಿ ಸ್ಪಿರೀಟನ್ನು ತುಂಬಲಾಗಿದೆ ಅವುಗಳನ್ನು ಮೈಸೂರಿನಲ್ಲಿ ಲೋಡ್ ಮಾಡಿ ಕೇರಳದ ಕಡೆಗೆ ಸಾಗಿಸುತ್ತಿರುವುದಾಗಿ ತಿಳಿಸಿದ ಮೇರೆಗೆ ಸ್ಪಿರೀಟನ್ನು ಸಾಗಾಟ ಮಾಡಲು ಸರಕಾರದ ರಹದಾರಿಯ ಬಗ್ಗೆ ಕೇಳಲಾಗಿ, ಯಾವುದೇ ರಹದಾರಿ ಪತ್ರವಿಲ್ಲ ಎಂದು ತಿಳಿಸಿದ ಮೇರೆಗೆ ವಾಹನದ ಚಾಲಕ ಮತ್ತು ವಾಹನದ ಕ್ಲೀನರನ್ನು ಸ್ವಾಧೀನಕ್ಕೆ ತೆಗೆದುಕೊಂಡು ಅವರ ಹೆಸರು ಮತ್ತು ವಿಳಾಸದ ಬಗ್ಗೆ ವಿಚಾರಣೆ ಮಾಡಲಾಗಿ, ಚಾಲಕನ ಹೆಸರು ಅನೂಪ್ ಪಿ. ವರ್ಗೀಸ್, ತಂದೆ: ಪುರುಪರಂಬಿಲ್ ಮಥಾಯಿ ವರ್ಗೀಸ್, ತರಿಯೋಡ್ ಅಂಚೆ, ಕಾಪು, ವೈಲ್‌ವೀಡು, ವೈತ್ರಿ ತಾಲ್ಲೂಕು, ವಯನಾಡು ಜಿಲ್ಲೆ, ಕೇರಳ ರಾಜ್ಯ ಎಂದು ವಾಹನದ ಕ್ಲೀನರನ ಹೆಸರು ವಿನಯ್ ಜೋಸೆಫ್, ತಂದೆ: ಜೋಸೆಫ್ ಥೋಮನ್, ಕಲ್ಪಟ್ಟಿ, ವೈತ್ರಿ ತಾಲ್ಲೂಕು, ವೈನಾಡು ಜಿಲ್ಲೆ, ಕೇರಳ ರಾಜ್ಯ ಎಂಬುವುದಾಗಿ ತಿಳಿಸಿದರು. ನಂತರ ಸದರಿ ವಾಹನವನ್ನು ಪರಿಶೀಲಿಸಲಾಗಿ ಟಾಟಾ ಮಿನಿ ವ್ಯಾನ್ (ಮಿನಿಲಾರಿ) ಯಾಗಿದ್ದು, ವಾಹನದ ಮುಂಭಾಗ ಮತ್ತು ಹಿಂಭಾಗದಲ್ಲಿ ಹಳದಿ ಬಣ್ಣವನ್ನು ಬಳಿಯಲಾಗಿದೆ. ವಾಹನದ ಎಡ ಬಲ ಭಾಗದಲ್ಲಿ ನೀಲಿ ಬಣ್ಣ ಬಳಿಯಲಾಗಿರುತ್ತದೆ. ಮುಂಭಾಗದಲ್ಲಿ ಹಳದಿ ಬಣ್ಣ ಬಳಿದಿದ್ದು ಅದರ ಮೇಲೆ ಕಪ್ಪು ಅಕ್ಷರದಲ್ಲಿ ಕೆಎಲ್-10-ಎ-1422 ಎಂಬುವುದಾಗಿ ನೋಂದಣಿ ಸಂಖ್ಯೆ ಬರೆದಿದ್ದು, ವಾಹನ ಹಿಂಭಾಗದಲ್ಲಿ ವಾಹನದ ಎಡ ಮತ್ತು ಬಲಭಾಗದಲ್ಲಿ ಕೆಎಲ್-10-ಎ-1422 ಎಂಬುವುದಾಗಿ ನೋಂದಣಿ ಸಂಖ್ಯೆ ಬರೆದಿರುವುದು ಕಂಡು ಬಂದಿರುತ್ತದೆ. ಸದರಿ ವಾಹನದ ಬಾಡಿಗೆ ಮುಚ್ಚಿದ ನೀಲಿ ಬಣ್ಣದ ಟಾರ್‌ಪಾಲನ್ನು ಬಿಚ್ಚಿ ತೆಗೆದು ಅಜಮಾಯಿಸಲಾಗಿ ಬಾಡಿಯ ಎಡ ಮತ್ತು ಬಲಭಾಗದಲ್ಲಿ ತರಕಾರಿ ಮತ್ತು ಈರುಳ್ಳಿ, ಆಲೂಗಡ್ಡೆಗಳನ್ನು ತುಂಬಿದ ಗೋಣಿಚೀಲಗಳನ್ನು ಜೋಡಿಸಿದ್ದು ಮತ್ತು ಅವುಗಳ ಮೇಲೆ ಹೂಕೋಸಿನ ಎಲೆಗಳನ್ನು ತುಂಬಿದ ಚೀಲಗಳನ್ನು ಮತ್ತು ಎಲೆಗಳನ್ನು ಹಾಕಿರುವುದು ಕಂಡು ಬಂದು ಸದರಿ ತರಕಾರಿ ಮೂಟೆಗಳನ್ನು ತೆಗೆದು ನೋಡಲಾಗಿ ವಾಹನದ ಬಾಡಿಯಲ್ಲಿ ಬಿಳಿ ಬಣ್ಣದ ಕ್ಯಾನುಗಳನ್ನು ಜೋಡಿಸಿ ಇಟ್ಟಿರುವುದು ಕಂಡು ಬರುತ್ತದೆ. ಬಾಡಿಯಲ್ಲಿ ತಳಭಾಗ ಹಿಂಭಾಗದ ಡೋರಿನ ಬಳಿ ಅಡ್ಡಲಾಗಿ 2 ಕ್ಯಾನಿನಲ್ಲಿ ತಲಾ 5 ಕ್ಯಾನುಗಳನ್ನು ನೀಳವಾಗಿ ಏಳು ಸಾಲುಗಳಲ್ಲಿ ತಲಾ 6 ಕ್ಯಾನುಗಳನ್ನು ಜೋಡಿಸಿ ಅವುಗಳ ವಾಹನದ ಮಧ್ಯಭಾಗದಲ್ಲಿ ಕ್ಯಾನುಗಳ ಮೇಲೆ ನೀಳವಾಗಿ 6 ಕ್ಯಾನುಗಳನ್ನು ಜೋಡಿಸಿದ್ದು, ಅವುಗಳ ಹಿಂಭಾಗದಲ್ಲಿ ಅಂದರೆ ಡೋರಿನ ಭಾಗದಲ್ಲಿ 3 ಕ್ಯಾನುಗಳನ್ನು ಅಡ್ಡಲಾಗಿ ಜೋಡಿಸಿಟ್ಟಿರುವುದು ಕಂಡು ಬರುತ್ತದೆ. 6 ಸಾಲುಗಳಲ್ಲಿ ತಲಾ 5 ಕ್ಯಾನುಗಳಿದ್ದು, ಒಟ್ಟು 30 ಕ್ಯಾನುಗಳಿರುತ್ತದೆ. ಎಲ್ಲಾ ಕ್ಯಾನುಗಳನ್ನು ಮುಚ್ಚಳ ತೆಗೆದು ನೋಡಲಾಗಿ ಅದರಲ್ಲಿ ತುಂಬಿದ್ದ ದ್ರವದ ವಾಸನೆಯನ್ನು ನೋಡಲಾಗಿ ಸ್ಪಿರಿಟ್ ವಾಸನೆ ಬರುತ್ತಿದ್ದು, ಸದರಿ ಕ್ಯಾನುಗಳು ಬಿಳಿಯ ಬಣ್ಣದಿಂದ ಕೂಡಿದ್ದು, 35 ಲೀಟರಿನ ಕ್ಯಾನುಗಳಾಗಿರುತ್ತವೆ. ಸದರಿ ಎಲ್ಲಾ ಕ್ಯಾನುಗಳಲ್ಲಿ ಸ್ಪಿರಿಟ್ ಕ್ಯಾನುಗಳಲ್ಲಿ ಸ್ಪಿರಿಟ್ ದ್ರವ ಇದ್ದು, ಪ್ರತಿ ಕ್ಯಾನುಗಳಲ್ಲಿ ಸುಮಾರು 35 ಲೀಟರ್‌ನಷ್ಟು ಸ್ಪಿರಿಟ್ ದ್ರವವಿರುವುದು ಕಂಡು ಬಂದಿರುತ್ತದೆ. ಸದರಿ ಕ್ಯಾನ್‌ಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡು ರಾಸಾಯನಿಕ ಪರೀಕ್ಷೆಗೆ ಮಾದರಿಯಾಗಿ ಪ್ರತಿ ಕ್ಯಾನುಗಳಿಂದ 750 ಎಂ.ಎಲ್.ನಂತೆ ಸಂಗ್ರಹಿಸಿದ ಬಾಟಲಿಗಳಿಗೆ ಎಂಆರ್‌ಪಿಎಸ್-ಜಿ-1 ರಿಂದ ಜಿ-85 ರವರೆಗೆ ಕ್ರಮ ಸಂಖ್ಯೆಯನ್ನು ಹಾಗೂ ಕ್ಯಾನುಗಳಿಗೆ ಎಂಆರ್‌ಎಸ್ ಎ 1 ರಿಂದ ಎ 85 ಕ್ರಮ ಸಂಖ್ಯೆಯನ್ನು ಬರೆದಿರುತ್ತಾರೆ. ನಗರ ಸ್ಪಿರಿಟ್ ಕ್ಯಾನುಗಳ ಮೇಲೆ ತುಂಬಿದ್ದ ಗೋಣಿಚೀಲಗಳನ್ನು ಪರಿಶೀಲಿಸಲಾಗಿ ಈರುಳ್ಳಿ ತುಂಬಿದ 25 ಕೆ.ಜಿ.ಯ 5 ಚೀಲಗಳು ಆಲೂಗಡ್ಡೆ ತುಂಬಿರುವ 40 ಕೆ.ಜಿ.ಯ 5 ಚೀಲಗಳಿಗೆ ಸೌತೆಕಾಯಿ ತುಂಬಿರುವ 3 ಚೀಲಗಳ, ಹೂಕೋಸಿನ ಎಲೆಗಳನ್ನು ತುಂಬಿರುವ 8 ಚೀಲಗಳು ಇರುತ್ತದೆ. ಸದರಿ ವಾಹನ ಕ್ಯಾಟಿನ್ ಮೇಲ್ಭಾಗದಲ್ಲಿ ಒಂದು ಸ್ಟೆಪ್ನಿ ವೀಲ್ ಇರುತ್ತದೆ. ಮೇಲ್ಕಂಡ ವಾಹನ ಟಾರ್‌ಪಾಲ್, ಸ್ಪಿರಿಟ್ ತುಂಬಿದ್ದ ಕ್ಯಾನ್‌ಗಳನ್ನು ಮತ್ತು ಮಾದರಿ ಸಂಗ್ರಹಿಸಿದ ಸ್ಪಿರಿಟ್ ತುಂಬಿದ ಬಾಟಲಿಗಳನ್ನು ಮತ್ತು ಮೇಲ್ಕಂಡ ತರಕಾರಿ ಮೂಟೆಗಳನ್ನು ಅಮಾನತ್ತುಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿ ಮಾಡಲಾಯಿತು. ಮೇಲ್ಕಂಡ ಆರೋಪಿಗಳು ಕಾನೂನು ಬಾಹಿರವಾಗಿ ವಾಹನದಲ್ಲಿ ಅಕ್ರಮವಾಗಿ ಸ್ಪಿರಿಟನ್ನು ಸಾಗಾಣಿಕೆ ಮಾಡುತ್ತಿದ್ದುದರಿಂದ 1965 ರ ಕಲಂ 32, 34, 38(ಎ) (43ಎ) ರ ಪ್ರಕಾರ ಅಪರಾಧವಾದ್ದರಿಂದ ವಾಹನ ನಂ: ಮಿನಿಲಾರಿ ಕೆಎಲ್-10ಎ-1422 ರ ಸಮೇತ ಮೇಲ್ಕಂಡ ಎಲ್ಲಾ ಸ್ವೊತ್ತುಗಳನ್ನು ವಶಕ್ಕೆ ತೆಗೆದುಕೊಂಡು ಮೊಕದ್ದಮೆ ಸಂ:108:2003 ದಿನಾಂಕ:19.9.2003 ರಂತೆ ಮೊಕದ್ದಮೆ ದಾಖಲು ಮಾಡಿಕೊಂಡು ಮುಂದಿನ ಕ್ರಮದ ಬಗ್ಗೆ ಅಂದಿನ ಅಬಕಾರಿ ಉಪ ನಿರೀಕ್ಷಕರು, ಉಪವಿಭಾಗ ಮಡಿಕೇರಿ ಇವರಿಗೆ ದಿನಾಂಕ:20.9.2003 ರಂದು ಹಸ್ತಾಂತರಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು, ಮಡಿಕೇರಿ ಉಪವಲಯ ಇವರು ವಶಪಡಿಸಿಕೊಂಡ ಮದ್ಯಸಾರದಿಂದ ತೆಗೆದಿದ್ದ ಮಾದರಿಯನ್ನು ರಾಸಾಯನಿಕ ತಜ್ಞರು, ಮಂಗಳೂರು ರಾಸಾಯನಿಕ ಕೇಂದ್ರ ಮಂಗಳೂರುರವರಿಗೆ ದಿನಾಂಕ:14.10.2003 ರಂದು ಕಳಿಸಲಾಗಿದ್ದ, ಅವರ ವರದಿ ಸಂ:ಇ.1159-85 ದಿನಾಂಕ:15.10.2003 ರಲ್ಲಿ ಸದರಿ ಮದ್ಯಸಾರದಲ್ಲಿ ಶೇ.66 ಸಾಂದ್ರತೆ ಹೊಂದಿರುವುದಾಗಿ ಮತ್ತು ಮಾನವ ಸೇವೆನೆಗೆ ಯೋಗ್ಯವಿರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ ವಶಪಡಿಸಿಕೊಂಡ 35 ಲೀ.ನ 85 ಕ್ಯಾನುಗಳ ಒಟ್ಟು 2975 ಲೀಟರ್ ಮದ್ಯಸಾರವನ್ನು ಸರಕಾರದ ಆದಾಯದ ಹಿತದೃಷ್ಟಿಯಿಂದ ದಿ:1.12.2003 ರಂದು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ದಿನಾಂಕ:17.1.2004 ರಂದು ರಹದಾರಿ ಸಂ:17590:17.1.2004 ರಲ್ಲಿ ಸಾರಾಯಿ ಸಂಸ್ಕರಣಾ ಘಟಕ, ಮೈಸೂರು ಸಕ್ಕರೆ ಕಾರ್ಖಾನೆ ನಿಯಮಿತ, ಮಂಡ್ಯ ಇಲ್ಲಿಗೆ ನೀಡಲಾಗಿರುತ್ತದೆ. ಸದರಿ ಮದ್ಯಸಾರದಿಂದ 56,971.00 ರೂ.ಸರಕಾರಕ್ಕೆ ಸಂದಾಯವಾಗಿರುತ್ತದೆ. ಎಸ್‌ಜಿಐ, ಮಡಿಕೇರಿ ದಿನಾಂಕ:24.4.2004 ಮತ್ತು ಪ್ಲಾಸ್ಟಿಕ್ ಕ್ಯಾನ್‌ನ ಮಾರಾಟದಿಂದ ಸರ್ಕಾರಕ್ಕೆ 935.00 ರೂ. ಚಲನ್ ನಂ:25:7.10.2004 ಮತ್ತು ಮಾರಾಟ ತೆರಿಗೆ + ಸೆಸ್ ಸೇರಿ ಒಟ್ಟು 43.00 ರೂ. ಚಿ.ನಂ.26 ದಿನಾಂಕ:7.10.2004 ಎಸ್‌ಜಿಐ, ಮಡಿಕೇರಿನಲ್ಲಿ ಸಂದಾಯವಾಗಿರುತ್ತದೆ. ಶ್ರೀ ಕೆ.ವಿ. ಹಸನ್ ರವರು ವಶಪಡಿಸಿಕೊಂಡ ವಾಹನದ ಮಾಲೀಕರೆಂದು ಅವರಿಂದ ಅಧಿಕೃತ ಹಕ್ಕುಪತ್ರ ಪಡೆದವರೆಂದು ಶ್ರೀ ಸುರೇಶ್‌ಬಾಬು, ತಂದೆ:ಕನ್ನನ್, ಕಳ್ಳದ ಹೌಸ್, ಕಲ್ಪಟ್ಟ ಅಂಚೆ, ವಯನಾಡು ಜಿಲ್ಲೆ, ಕೇರಳ ಇವರು ದಿನಾಂಕ:7.10.2003 ರಂದು ಅರ್ಜಿಯನ್ನು ಸಲ್ಲಿಸಿ ನ್ಯಾಯಾಲಯ ವಿಧಿಸುವ ಷರತ್ತುಗಳಿಗೆ ಬದ್ಧನಾಗಿರುತ್ತೇನೆ. ವಾಹನವನ್ನು ಮಧ್ಯಂತರ ವಶಕ್ಕೆ ನೀಡಬೇಕಾಗಿ ಕೋರಿಕೊಂಡು ಅರ್ಜಿಯನ್ನು ವಕೀಲರ ಮೂಲಕ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿಯವರ ಅರ್ಜಿಯ ಕೋರಿಕೆಯನ್ನು ಸಹಾಯಕ ಸರಕಾರಿ ಅಭಿಯೋಗ ನಿರ್ದೇಶಕರು ದಿನಾಂಕ:19.2.2004 ರ ಆಕ್ಷೇಪಣಾ ಪಟ್ಟಿಯನ್ನು ಸಲ್ಲಿಸಿ ಅವರ ಕೋರಿಕೆಯನ್ನು ವಜಾಗೊಳಿಸಲು ಈ ನ್ಯಾಯಾಲಯಕ್ಕೆ ಪ್ರಾರ್ಥಿಸಿದ್ದಾರೆ ಮತ್ತು ಈ ನ್ಯಾಯಾಲಯದಿಂದ ವಾಹನ ಮಧ್ಯಂತರ ಬಿಡುಗಡೆಗೊಳಿಸುವ ಬಗ್ಗೆ ವಾಹನ ಮಾಲೀಕರ ಕೋರಿಕೆಯನ್ನು ಪರಿಗಣಿಸಿರುವುದಿಲ್ಲ.

ವಾಹನದ ಅಧಿಕೃತ ಮಾಲೀಕರನ್ನು ಪತ್ತೆ ಹಚ್ಚಲು ದಿನಾಂಕ:14.10.2003 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ತಿರೂರು, ಕೇರಳರಾಜ್ಯ ಇವರಿಗೆ ನೋಂದಣಿ ಅಂಚೆ ಮೂಲಕ ಪತ್ರ ಬರೆದು ವಾಹನ ಮಾಲೀಕತ್ವದ 'ಬಿ' ಎಕ್ಸ್‌ಟ್ರಾಕ್ಟ್‌ನ್ನು ಕಳುಹಿಸಿಕೊಡಲು ಕೋರಲಾಗಿತ್ತು. ದಿನಾಂಕ:4.12.2003ರ ಪತ್ರದಲ್ಲಿ ಶ್ರೀ ಕೆ.ವಿ. ಹಸನ್, ಬಿನ್:ಕುಜ್ಞಿ ಮೊಯಿದ್ದೀನ್ ವೆಲಪಿಲ್ ಹೌಸ್, ಕರುಂಬತ್ತೂರು ಎಂದು ದೃಢೀಕರಣ ಪತ್ರ ನೀಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ವಾಹನದ ಮಾಲೀಕರಾದ ಶ್ರೀ ಕೆ.ವಿ. ಹಸನ್‌ರವರಿಗೆ ದಿನಾಂಕ:10.12.2003 ರಂದು ನ್ಯಾಯಾಲಯಕ್ಕೆ ವಕೀಲರೊಂದಿಗೆ ಹಾಜರಾಗುವಂತೆ ಸೂಚಿಸಿ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43 'ಬಿ' ರಲ್ಲಿ ಕಾರಣ ಕೇಳಿ ನೋಟೀಸ್ ನೋಂದಣಿ ಅಂಚೆ ಮೂಲಕ

ನೀಡಲಾಗಿತ್ತು. ಸದರಿ ನೋಟೀಸಿಗೆ ಉತ್ತರವಾಗಿ ದಿ:26.12.2003 ರಂದು ವಾಹನದ ಮಾಲೀಕರ ಪರ ವಕೀಲರು ವಾಹನ ಮಾಲೀಕತ್ವದ 'ಬಿ' ಎಕ್ಸ್ ಟ್ರಾಕ್ಟ್‌ನ್ನು ಸುರೇಶ್‌ಬಾಬುರವರ ಅಧಿಕೃತ ಹಕ್ಕು ಪತ್ರ ಲಗತ್ತಿಸಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ನ್ಯಾಯಾಲಯದಲ್ಲಿ ವಿಚಾರಣೆಯನ್ನು ಪ್ರಾರಂಭಿಸುವ ಸಲುವಾಗಿ ವಾಹನದ ಮಾಲೀಕರನ್ನು ಹಾಜರಾಗಲು ಅವ'ರ ಪರ ವಕೀಲರಿಗೆ ದಿನಾಂಕ:18.1.2004, 12.2.2004 ರಂದು ನೋಟೀಸ್ ನೀಡಲಾಗಿತ್ತು. ಆದಾಗ್ಯೂ ವಾಹನದ ಮಾಲೀಕರು ಹಾಜರಾಗಿರುವುದಿಲ್ಲ. ದಿನಾಂಕ:11.3.2004 ರಂದು ಮಾಲೀಕರ ಪರ ವಕೀಲರು ಅರ್ಜಿಯನ್ನು ಸಲ್ಲಿಸಿ ಸದರಿಯವರು ವೃತ್ತಿಯಲ್ಲಿ ವೈದ್ಯರಾಗಿದ್ದು, ಸಂಬಂಧಪಟ್ಟ ದೃಢೀಕರಣ ಪತ್ರವನ್ನು ಲಗತ್ತಿಸಿರುತ್ತಾರೆ. ದಿನಾಂಕ:7.1.2006ರ ತದನಂತರವು ಈ ನ್ಯಾಯಾಲಯದಿಂದ ವಿಚಾರಣೆಯನ್ನು ನಿಗದಿಪಡಿಸಿ ವಕೀಲರಿಗೆ ಖುದ್ದಾಗಿ ಹಾಗೂ ವಾಹನದ ಮಾಲೀಕರಿಗೆ ನೋಟೀಸ್ ನೀಡಲಾಗಿದ್ದು, ವಕೀಲರು ಖುದ್ದಾಗಿ ಸಹಿ ಮಾಡಿ ನೋಟೀಸನ್ನು ಪಡೆದುಕೊಂಡಿದ್ದರೂ ಸಹ: ಸದರಿ ದಿನಾಂಕದಂದು ವಿಚಾರಣೆಗೆ ಹಾಜರಾಗುವುದಿಲ್ಲ.

ಈ ಪ್ರಕರಣಕ್ಕೆ ಸಂಬಂಧಪಟ್ಟ ಮಹಜರ್ ಸಾಕ್ಷಿಯಲ್ಲಿ ಒಬ್ಬರಾದ ಶ್ರೀ ಪಿ.ಬಿ. ರಘು ತಂದೆ: ಬಾಬುನಾಯ್ಕ, ಅರಣ್ಯ ರಕ್ಷಕ, ಅರಣ್ಯ ತನಿಖಾ ಠಾಣೆ, ಸಂಪಾಜೆ ಇವರನ್ನು ದಿನಾಂಕ:7.1.2006 ರಂದು ವಿಚಾರಣೆ ನಡೆಸಲಾಯಿತು. ಸದರಿ ವಿಚಾರಣೆಯಿಂದ ದಿ:19.9.2003ರ ಪ್ರಕರಣದಲ್ಲಿ ಜಪ್ತಿಪಡಿಸಿರುವ ವಾಹನ ಸಂ:ಕೆಎಲ್-10-ಎ-1422 ರಲ್ಲಿ ಅಕ್ರಮವಾಗಿ ಯಾವುದೇ ಅಧಿಕೃತ ಪತ್ರವಿಲ್ಲದೆ 2975 ಲೀಟರ್ ಮದ್ಯಸಾರ ಸಾಗಾಣಿಕೆಯಾಗಿರುವುದು ಅಕ್ರಮ ಸಾಗಾಣಿಕೆ ನಿಜವೆಂದು ಕಂಡು ಬಂದಿರುತ್ತದೆ. ಆದರೆ ವಾಹನದ ಮಾಲೀಕರಿಗೂ, ಅವರ ಪರ ವಕೀಲರಿಗೂ ವಿಚಾರಣೆಗೆ ಹಾಜರಾಗುವಂತೆ ದಿನಾಂಕ:4.3.2005, 5.4.2006, 21.4.2006, 16.12.2006, 14.2.2007, 13.4.2007, 19.4.2007 ರಂದು ನೋಟೀಸ್ ಜಾರಿ ಮಾಡಲಾಗಿರುತ್ತದೆ. ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯದ ಮುಂದೆ ಸಾಕಷ್ಟು ಅವಕಾಶಗಳನ್ನು ನೀಡಿದರೂ ಮೇಲಿನ ದಿನಾಂಕಗಳಂದು ಹಾಜರಾಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ ವಾಹನ ಸಂ:ಮಿನಿಲಾರಿ ಸಂ:ಕೆಎಲ್-10-ಎ-1422 ರಲ್ಲಿ ಅಕ್ರಮವಾಗಿ 2975ಲೀ. ಮದ್ಯಸಾರವನ್ನು ಯಾವುದೇ ರಹದಾರಿ ಪತ್ರವಿಲ್ಲದೆ ಸಾಕಾಣಿಕೆ ಮಾಡಿರುವುದು ವಾಹನ ಮಾಲೀಕರ ಸ್ವಂತ ಲಾಭಕ್ಕಾಗಿ ಎಂಬುವುದು ನಿಸ್ಸಂದೇಹವಾಗಿ ಕಂಡು ಬರುತ್ತದೆ. ಈ ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತಿಪಡಿಸಲಾಗಿರುವ ವಾಹನದಲ್ಲಿ ಅಕ್ರಮ ಮದ್ಯಸಾರ ಸಾಗಾಣಿಕೆಯಾಗಿರುವುದು ಈ ನ್ಯಾಯಾಲಯದಲ್ಲಿ ಮನವರಿಕೆಯಾಗಿರುವುದರಿಂದ ಮತ್ತು ಸದರಿ ವಾಹನವನ್ನು ವಾಹನ ಮಾಲಿಕರು ಕಾನೂನಿನನ್ವಯ ತಮ್ಮ ವಶಕ್ಕೆ ಪಡೆಯುವ ಬಗ್ಗೆ ಆಸಕ್ತಿ ತೋಂದರೆ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಮತ್ತು ವಶಪಡಿಸಿಕೊಳ್ಳಲಾದ ದಿನದಿಂದ ಇಂದಿನವರೆಗೆ ಅಂದರೆ ಸುಮಾರು ಮೂರು ವರ್ಷಕ್ಕೂ ಹೆಚ್ಚು ಇಲಾಖೆಯ ವಶದಲ್ಲಿ ತೆರೆದ ಆವರಣದಲ್ಲಿ ನಿಲ್ಲಿಸಲಾಗಿದ್ದು, ಸದರಿ ವಾಹನವು ಕೊಡಗು ಜಿಲ್ಲೆಯ ವಿಶೇಷ ಹವಾಮಾನದ ವೈಪರಿತ್ಯಕ್ಕೆ ಒಳಗಾಗಿ ಅದರ ಬಿಡಿ ಭಾಗಗಳು ತುಕ್ಕು ಹಿಡಿದು ತೀರ ಹದಗೆಟ್ಟು ಸ್ಥಿತಿಯುಂಟಾಗಿ ಸರಕಾರಕ್ಕೆ ಬರುವ ಆದಾಯವು ಕಡಿಮೆಯಾಗುವ ಸಾಧ್ಯತೆ ಇರುವುದರಿಂದ ಜಪ್ತಾದ ವಾಹನಕ್ಕೆ ಸಂಬಂಧಿಸಿದ ಪ್ರಕರಣವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ನಿರ್ಣಯಿಸಿ ಈ ಕೆಳಕಂಡ ಆದೇಶ.

**ಆದೇಶ**

ಹೆಚ್.ಎನ್. ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಸದರಿ ಆರಕ್ಷಕ ಉಪ ನಿರೀಕ್ಷಕರು, ಮಡಿಕೇರಿ ಗ್ರಾಮಾಂತರ ಠಾಣೆ ಇವರ ಮೊಕದ್ದಮೆ ಸಂ:108:2003 ದಿನಾಂಕ:19.9.2003 ರಂದು ಜಪ್ತಿ ಮಾಡಲಾದ ಮಿನಿಲಾರಿ ಸಂ:ಕೆಎಲ್-10-ಎ-1422 ರನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಸಿ) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಈ ಆದೇಶವನ್ನು ಇಂದು ಅಂದರೆ ದಿನಾಂಕ:18.5.2007 ರಂದು ಬೆರಳಚ್ಚು ಮಾಡಿಸಿ, ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 733

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಮಂಡ್ಯ ಉಪ ವಿಭಾಗ-2, ಮಂಡ್ಯ ಇವರ ನ್ಯಾಯಾಲಯ**
**ಸಂಖ್ಯೆ: ಡಬ್ಲ್ಯೂಸಿಎ/ಎಸ್‌ಸಿ/ಸಿಆರ್-38/07, ದಿನಾಂಕ: 6ನೇ ಜೂನ್ 2007**

**ಅರ್ಜಿದಾರರು:**

1. ಶ್ರೀಮತಿ ಮೀನಾಕ್ಷಿ ವೈಫ್ ಆಫ್ ಲೇ ಕುಮಾರ
2. ಜಗದೀಶ ಬಿನ್ ಲೇಟ್ ಕುಮಾರ
3. ಶಿಲ್ಪ ಬಿನ್ ಲೇಟ್ ಕುಮಾರ
4. ಎಂ.ಎಂ. ನಂಜುಂಡೇಗೌಡ
   ವಾಸ: ಗುರುವಾಯ ಪಟ್ಟಣ ಗ್ರಾಮ, ಹಕ್ಕಿ ಆಲೂರು,
   ಹಾನಗಲ್ ತಾಲ್ಲೂಕು, ಹಾವೇರಿ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1. ಕೆ. ರಾಧಕೃಷ್ಣ ನಾಯಕ್ ಬಿನ್ ನರಸಿಂಗನಾಯಕ್,
   ವಾಸ: ಉದಯಗಿರಿ, ನೆಕ್ಕಿಲೆಡಿ ಪೋಸ್ಟ್, ಉಪ್ಪಿನಂಗಡಿ,
   ಪುತ್ತೂರು ಜಿಲ್ಲೆ.
2. ದಿ ಡಿವಿಜನಲ್ ಮ್ಯಾನೇಜರ್,
   ಓರಿಯಂಟಲ್ ಇನ್ ಶ್ಯೂರೆನ್ಸ್ ಕಂ.ಲಿ.,
   ಡಿವಿಜನಲ್ ಆಫೀಸ್, ನ್ಯೂ ಮುಸ್ಲಿಂ ಹಾಸ್ಟೆಲ್ ಕಾಂಪ್ಲೆಕ್ಸ್,
   ಸರಸ್ವತಿಪುರಂ, ಮೈಸೂರು.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ 4.6.2007 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, 1ನೇ ಅರ್ಜಿದಾರರ ಪತಿ ಹಾಗೂ 2 ಮತ್ತು 3ನೇ ಅರ್ಜಿದಾರರ ತಂದೆ ಇವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯಿದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೇ,

ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಬಿ. ಗೋವಿಂದಪ್ಪ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಮಂಡ್ಯ ಉಪವಿಭಾಗ-2, ಮಂಡ್ಯ-571 401.

ಪಿ.ಆರ್. 734

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ನ್ಯಾಯಾಲಯದಲ್ಲಿ**

**ಫಿರ್ಯಾದುದಾರರು:**
ಅಬಕಾರಿ ಉಪ ನಿರೀಕ್ಷಕರು,
ಜಗಳೂರು ಉಪ ವಲಯ, ಜಗಳೂರು

**ಪ್ರತಿನಿಧಿಸುವರು:**
ಸಹಾಯಕ ಅಭಿಯೋಗ ನಿರ್ದೇಶಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ವಿರುದ್ಧ**

**ಆರೋಪಿತರು:**
ಕೆ.ಆರ್. ಗಂಗಾಧರ್, ಬಿನ್ ಕೆ.ಹೆಚ್. ರಂಗಪ್ಪ,
ರೇಣುಕಾ ಎಕ್ಸ್‌ಟೆನ್‌ಷನ್, ದಾವಣಗೆರೆ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:14.03.1995 ರಂದು ಚುನಾವಣಾ ಕಾರ್ಯದ ಕರ್ತವ್ಯವನ್ನು ಚಿತ್ರದುರ್ಗ ನಗರ ಠಾಣೆಯ ಪೊಲೀಸ್ ಉಪ ನಿರೀಕ್ಷಕರು ನಿರ್ವಹಿಸುತ್ತಿದ್ದಾಗ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗುತ್ತಿದೆ ಎಂಬ ಭಾತ್ಮಿಯ ಮೇರೆಗೆ ಪಂಚರನ್ನು ಬರಮಾಡಿಕೊಂಡು ರಸ್ತೆ ಕಾವಲು ಕಾಯುತ್ತಿದಾಗ ಜಗಳೂರು ಪೊಲೀಸ್ ಠಾಣೆಯ ಮುಂಭಾಗ ಬಂದ ವಾಹನ ಸಂ. ಎಂ.ವೈ.ವೈ. 1861ನ್ನು ತಡೆದು ನಿಲ್ಲಿಸಿ ತಪಾಸಣೆ ಮಾಡಿ ನೋಡಲಾಗಿ ಅದರಲ್ಲಿ 180 ಮಿಲಿಯ 20 ಬಾಟಲಿಸನ್‌ಷೆನ್ ಗ್ರೇಪ್ ಬ್ರಾಂದಿಯನ್ನು ಸಾಗಾಣಿಕೆ ಮಾಡುತ್ತಿದ್ದುದು ಕಂಡು ಬಂದಿದ್ದು ಚುನಾವಣಾ ಸಮಯದಲ್ಲಿ ಮದ್ಯಪಾನ ನಿಷೇಧದ ಕಾಲದಲ್ಲಿ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದರಿಂದ ಪಂಚರ ಸಮಕ್ಷಮ ಒಂದು ಬಾಟಲಿಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ತೆಗೆದು ಪಂಚರ ಸಹಿ ಪಡೆದು ನಂತರ ಸೀಲ್ ಮಾಡಿ ಪಂಚರ ಸಮಕ್ಷಮ ವಾಹನವನ್ನು ಮದ್ಯದೊಂದಿಗೆ ಜಪ್ತಿ ಮಾಡಲಾಯಿತು. ಈ ಬಗ್ಗೆ ಫಿರ್ಯಾಧಿಯ ಗುನ್ನೆ ಸಂಖ್ಯೆ:46:95 ರನ್ವಯ ಪ್ರಕರಣ ದಾಖಲಿಸಿ ಸಂಬಂಧಿಸಿದ ದಾಖಲಾತಿಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಾವಣಗೆರೆ, ಇವರು ನೀಡಿದ ವಾಹನಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ ವಾಹನವು ಶ್ರೀ ಕೆ.ಆರ್. ಗಂಗಾಧರ್ ಬಿನ್ ಕೆ.ಹೆಚ್. ರಂಗಪ್ಪ ಇವರ ಹೆಸರಿನಲ್ಲಿರುವುದಾಗಿ ತಿಳಿದು ಬಂದಿರುತ್ತದೆ. ವಾಹನದ ಮಾಲಿಕರು ದಿನಾಂಕ:17.3.1995 ರಂದು ವಕೀಲರ ಮೂಲಕ ಅರ್ಜಿ ಸಲ್ಲಿಸಿ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆಗೊಳಿಸಲು ಕೋರಿದ್ದು ಈ ಪ್ರಾಧಿಕಾರವು ಅರ್ಜಿದಾರರ ಅರ್ಜಿಯನ್ನು ಪರಿಶೀಲಿಸಿ ಕೆಲವು ಷರತ್ತುಗಳನ್ನು ವಿಧಿಸಿ ಈ ಷರತ್ತುಗಳನ್ನು ಪೂರೈಸಿದಲ್ಲಿ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆಗೊಳಿಸುವುದಾಗಿ ಆದೇಶ ನೀಡಿದ್ದು ಅದರಂತೆ ಅಂದರೆ ದಿನಾಂಕ:4.4.1998 ರಂದು ಅರ್ಜಿದಾರರು 50,000-00 ರೂ.ಗಳ ಇಂಡೆಮ್ನಿಟಿ ಬಾಂಡನ್ನು ಸಲ್ಲಿಸಿದ್ದರಿಂದ ಹಾಗೂ ತಿಮ್ಮಪ್ಪ ಬಿನ್ ದೊಡ್ಡದಾಸಪ್ಪ, ವ್ಯವಸಾಯಗಾರರು, ಜಗಳೂರು, ಇವರು 50,000-00 ರೂ.ಗಳ ಷ್ಯೂರಿಟಿಯನ್ನು ನೀಡಿದ್ದರಿಂದ ಈ ವಾಹನವನ್ನು ಮಾಲಿಕರ ವಶಕ್ಕೆ ತಾತ್ಕಾಲಿಕವಾಗಿ ಬಿಡುಗಡೆಗೊಳಿಸಲಾಗಿತ್ತು.

ಈ ಪ್ರಾಧಿಕಾರವು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಬಿ) ಯ ಅಡಿಯಲ್ಲಿ ವಾಹನದ ಮಾಲಿಕರಿಗೆ ಕಾರಣ ಕೇಳುವ ನೋಟೀಸನ್ನು ನೀಡಿ ಅವರಿಗೆ ಜಾರಿಗೊಳಿಸಲಾಗಿತ್ತು. ನಂತರ ವಾಹನದ ಮಾಲಿಕರಾದ ಶ್ರೀ ಕೆ.ಆರ್. ಗಂಗಾಧರ್, ಇವರು ದಿ:17.5.06 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಲಿಖಿತ ಮನವಿ ಸಲ್ಲಿಸಿ ಈಗಾಗಲೇ ಕೋರಿಕೊಂಡಂತೆ ಮೊಕದ್ದಮೆಯನ್ನು ಇತ್ಯರ್ಥಪಡಿಸಲು ಕೋರಿರುತ್ತಾರೆ. ಈ ಪ್ರಕರಣದಲ್ಲಿ ವಾಹನವನ್ನು ದಿನಾಂಕ:14.03.1995 ರಂದು ಜಪ್ತಿ ಮಾಡಲಾಗಿದ್ದು ವಾಹನವನ್ನು ಜಪ್ತಿ ಮಾಡಿ ಸುಮಾರು 12 ವರ್ಷಗಳು ಮುಗಿದಿರುತ್ತದೆ. ಪ್ರಕರಣವನ್ನು ಇತ್ಯರ್ಥಗೊಳಿಸುವಲ್ಲಿ ವಿಳಂಬ ಮಾಡಿದಲ್ಲಿ ವಾಹನದ ಮೌಲ್ಯ ಕಡಿಮೆಯಾಗಿ ಸರ್ಕಾರದ ಆದಾಯಕ್ಕೆ ನಷ್ಟವುಂಟಾಗುವ ಸಂಭವವಿರುತ್ತದೆ. ವಾಹನದ ಮಾಲಿಕರು ಲಿಖಿತ ಮನವಿಯನ್ನು ಪರಿಶೀಲಿಸಿ ವಾಹನವನ್ನು ಮುಟ್ಟುಗೋಲು ಹಾಕಿಕೊಂಡು ವಿಲೇಮಾಡುವುದು ಸೂಕ್ತವೆಂದು ಈ ಪ್ರಾಧಿಕಾರವು ಅಭಿಪ್ರಾಯಪಟ್ಟಿರುವುದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂ:ಇಎಕ್ಸ್‌ಇ:ಡಿಟಿಸಿಆರ್:382:94-95, ದಿನಾಂಕ: 29ನೇ ಮೇ 2007**

ಬಿ.ವಿ. ಹೂವಪ್ಪಗೌಡ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 43(ಎ) ಯ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಚಿತ್ರದುರ್ಗ ನಗರ ಇವರು ದಿನಾಂಕ:14.3.1995 ರಂದು ಜಪ್ತಿಮಾಡಿದ ವಾಹನ ಸಂ.ಎಂ.ವೈ.ವೈ. 1861ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿರುತ್ತೇನೆ. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮದ್ಯವನ್ನು ರಾಸಾಯನಿಕ ವಿಶ್ಲೇಷಣೆಗಾಗಿ ತೆಗೆದು ಮಾದರಿಯನ್ನು ಹೊರತುಪಡಿಸಿ ಉಳಿದ ಮದ್ಯವನ್ನು ವಿಲೇಗೊಳಿಸಿದ ಕ್ರಮವನ್ನು ಸಿಂಧುತ್ವಗೊಳಿಸಲಾಗಿದೆ.

ಈ ಆದೇಶವನ್ನು ಇಂದು ಅಂದರೆ ದಿ:29.5.2007 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಇ.ಐ.ಬಿ. ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 735

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ನ್ಯಾಯಾಲಯದಲ್ಲಿ**

**ಫಿರ್ಯಾದುದಾರರು:**
ಅಬಕಾರಿ ನಿರೀಕ್ಷಕರು,
ಹರಪನಹಳ್ಳಿ ಉಪ ವಿಭಾಗ.

**ಪ್ರತಿನಿಧಿಸುವರು:**
ಸಹಾಯಕ ಅಭಿಯೋಗ ನಿರ್ದೇಶಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ವಿರುದ್ಧ**

ಎ. ರಾಮಕೃಷ್ಣಪ್ಪ ಬಿನ್ ಎ. ವೆಂಕಪ್ಪ,
ಇಂಡಸ್ಟ್ರಿಯಲ್ ಏರಿಯಾ, ಟಿ.ಬಿ. ಡ್ಯಾಮ್ ರಸ್ತೆ,
ಹೊಸಪೇಟೆ.

ದಿನಾಂಕ:3.9.1996 ರಂದು ಅಕ್ರಮವಾಗಿ ಸಾರಾಯಿ ಸಾಗಾಣಿಕೆಯಾಗುತ್ತಿದೆ ಎಂಬ ಭಾತ್ಮಿಯ ಮೇರೆಗೆ ಅಬಕಾರಿ ನಿರೀಕ್ಷಕರು, ಹರಪನಹಳ್ಳಿ ಉಪ ವಿಭಾಗ, ಇವರು ಸಿಬ್ಬಂದಿಯೊಂದಿಗೆ ಪಂಚರನ್ನು ಬರಮಾಡಿಕೊಂಡು ಹರಪನಹಳ್ಳಿಯಿಂದ ನೀಲಗುಂದ ಕ್ರಾಸ್‌ಗೆ ಹೋಗುತ್ತಿದಾಗ ಮಧ್ಯಾಹ್ನ ಸುಮಾರು 3.30 ಗಂಟೆಗೆ ನೀಲಗುಂದ ಗ್ರಾಮದ ಕ್ರಾಸ್‌ನ ಬಲಭಾಗದಲ್ಲಿ ಒಂದು ಟಾಟಾ ವ್ಯಾನ್ ಸಂ. ಕೆಎ 34-2175 ನಿಂತಿರುವುದು ಕಂಡು ಬಂದಿದ್ದು, ಪಂಚರೊಂದಿಗೆ ವಾಹನವನ್ನು ಪರಿಶೀಲಿಸಲಾಗಿ ಅದರಲ್ಲಿ ಸಾರಾಯಿ ಸ್ಯಾಚೆಟ್‌ಗಳನ್ನು ತುಂಬಿದ 172 ಚೀಲಗಳಿದ್ದು ಪ್ರತಿಯೊಂದರಲ್ಲಿ 300 ಸ್ಯಾಚೆಟ್ಟುಗಳಿದ್ದು, ಈ ಸಾರಾಯಿಯನ್ನು ಸಾಗಿಸಲು ಯಾವುದೇ ರಹದಾರಿ ಇಲ್ಲದಿರುವುದರಿಂದ ಚೀಲಗಳ ಪೈಕಿ 9 ಚೀಲಗಳಿಂದ 100 ಮಿಲಿಯ ಒಂದೊಂದು ಪ್ಯಾಕೆಟ್‌ನ್ನು ರಾಸಾಯನಿಕ ಪರೀಕ್ಷೆಗೆ ಮಾದರಿಗಳನ್ನು ತೆಗೆದು ದಾರರಿಂದ ಕಟ್ಟಿ ಸೀಲಿನಿಂದ ಮೊಹರು ಮಾಡಿ ಸಾಕ್ಷಿದಾರರ ಸಹಿಪಡೆದ ನಂತರ ಸ್ಥಳದಲ್ಲಿಯೇ ಪಂಚನಾಮೆ ಬರೆದು ಪಂಚರ ಸಹಿ ಪಡೆದು ಅವರ ಸಮಕ್ಷಮದಲ್ಲಿ ಸಾರಾಯಿಯೊಂದಿಗೆ ವಾಹನ ಸಂಖ್ಯೆ:ಕೆಎ-34-2175ನ್ನು ಜಪ್ತಿ ಮಾಡಲಾಗಿದ್ದು ವಾಹನದಲ್ಲಿನ ವಾಹನ ಚಾಲಕರಾದ ಎ.ಖಲೀಲ್ ಬಿನ್ ಇಮಾಮ್ ಸಾಬ್, ರಾಜೇಂದ್ರ ನಗರ, ಹಾವೇರಿ ತಾಲ್ಲೂಕು ಮತ್ತು ಲಾರಿಯ ಕ್ಲೀನರ್ ಎನ್. ಅಂಜಿನಯ್ಯ ಬಿನ್ ನಾಗಪ್ಪ, ರಾಜೇಂದ್ರ ನಗರ, ಹಾವೇರಿ ಇವರುಗಳನ್ನು ದಸ್ತಗಿರಿ ಮಾಡಿದ್ದು ಅಬಕಾರಿ ನಿರೀಕ್ಷಕರು, ಹರಪನಹಳ್ಳಿ ಉಪ ವಿಭಾಗ ಇವರು ಮೊಕದ್ದಮೆ ಸಂಖ್ಯೆ:ಅಇ:ಉವಿ:ಹ.ಹಳ್ಳಿ, ಗುನ್ನೆ ಸಂ:2:96-97, ದಿನಾಂಕ:3.9.1996ರ ಮೇರೆಗೆ ಮೊಕದ್ದಮೆಯನ್ನು ದಾಖಲಿಸಿಕೊಂಡು ವಿವರವನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಶ್ರೀ ಎ. ರಾಮಕೃಷ್ಣ ವಾಹನದ ಮಾಲಿಕರು ಇವರು ದಿನಾಂಕ:20.9.1996 ರಂದು ವಾಹನ ಬಿಡುಗಡೆಗೆ ಕೋರಿ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿದ್ದರು. ಅರ್ಜಿದಾರರ ಅರ್ಜಿಯನ್ನು ಪರಿಶೀಲಿಸಿ ಈ ಪ್ರಾಧಿಕಾರವು ದಿನಾಂಕ:26.9.1996ರ ಆದೇಶದಲ್ಲಿ ಕೆಲವು ಷರತ್ತುಗಳನ್ನು ವಿಧಿಸಿ ವಾಹನವನ್ನು ತಾತ್ಕಾಲಿಕವಾಗಿ ವಾಹನದ ಮಾಲಿಕರ ವಸಕ್ಕೆ ಬಿಡಲು ಆದೇಶ ನೀಡಲಾಗಿತ್ತು. ವಾಹನದ ಈ ಪ್ರಾಧಿಕಾರದ ಆದೇಶದ ಅನ್ವಯ 80,000-00 ರೂ.ಗಳ ಬ್ಯಾಂಕ್ ಗ್ಯಾರಂಟಿಯನ್ನು ವೈಶ್ಯ ಬ್ಯಾಂಕ್, ಬಳ್ಳಾರಿ ಇವರಿಂದ ಪಡೆದು ಸಲ್ಲಿಸಿದ್ದುದರಿಂದ ಹಾಗೂ ಆದೇಶದಲ್ಲಿ ಇತರ ಷರತ್ತುಗಳ್ನು ಪೂರೈಸಿದ್ದುದರಿಂದ ವಾಹನವನ್ನು ತಾತ್ಕಾಲಿಕವಾಗಿ ಮಾಲಿಕರ ವಶಕ್ಕೆ ಬಿಡುಗಡೆಗೊಳಿಸಲಾಗಿತ್ತು.

ಈ ಪ್ರಕಾರಣದ ಸಾಕ್ಷಿ ವಿಚಾರಣೆ ಕುರಿತು ದಾಖಲಾತಿಗಳನ್ನು ಪಡೆದುಕೊಂಡು ವಿಚಾರಣೆಗೆ ದಿನಾಂಕವನ್ನು ನಿಗದಿಪಡಿಸಿ ಪ್ರಕರಣದ ಫಿರ್ಯಾಧಿದಾರರಿಗೆ ಪಂಚರು ಹಾಗೂ ವಾಹನದ ಮಾಲಿಕರಿಗೆ ನೋಟೀಸುಗಳನ್ನು ನೀಡಿದ್ದು ಅಭಿಯೋಗದ ಪರವಾಗಿ ಸಾಕ್ಷಿಗಳ ವಿಚಾರಣೆ ಮಾಡಿದ್ದು ನಿಶಾನೆಗಳನ್ನು ಗುರುತಿಸಲಾಯಿತು. ಕ್ಲೈಮುದಾರರ ಪರವಾಗಿ ಯಾವುದೇ ಸಾಕ್ಷಿಯನ್ನು ಮಾಡಿರುವುದಿಲ್ಲ ಹಾಗೂ ನಿಶಾನೆಗಳನ್ನು ಗುರುತಿಸಿರುವುದಿಲ್ಲ.

ಪ್ರಕರಣದಲ್ಲಿ ಲಭ್ಯವಿರುವ ದಾಖಲಾತಿಗಳು ಹಾಗೂ ಸಾಕ್ಷಿ ವಿಚಾರಣೆಗಳನ್ನು ಪುರಾವೆಗೆ ಹಾಗೂ ಗಣನೆಗೆ ತೆಗೆದುಕೊಂಡು ಮತ್ತು ಪ್ರಕರಣದ ಸಂಪೂರ್ಣ ವಿದ್ಯಮಾನವನ್ನು ಗಮನಿಸಿದಾಗ ಈ ಪ್ರಕರಣದಲ್ಲಿನ ಪಂಚರ ಸಾಕ್ಷಿಗಳಾದ ಶ್ರೀ ರಾಮು ಬಿನ್ ಹೊನ್ನಪ್ಪ ಮತ್ತು ಶ್ರೀ ಪರಮೇಶ್ವರಪ್ಪ ಬಿನ್ ಹನುಮಂತಪ್ಪ, ಇವರುಗಳು ದಿನಾಂಕ:18.2.2001 ರಂದು ಹಾಜರಾಗಿ ಅವರ ಸಾಕ್ಷಿಯನ್ನು ನೀಡಿರುತ್ತಾರೆ. ಈ ಪ್ರಕರಣದಲ್ಲಿ ಅರ್ಜಿದಾರರ ಪರ ವಕೀಲರ ಹಾಗೂ ಸಹಾಯಕ ಅಭಿಯೋಜಕ ನಿರ್ದೇಶಕರ ವಾದ-ವಿವಾದಗಳನ್ನು ಆಲಿಸಿದ್ದು ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವ ಕ್ರಮ ತೆಗೆದುಕೊಳ್ಳುವ ಮುನ್ನ ಈ ಕೆಳಕಂಡ ವಿವಾದಾಂಶಗಳ ಉತ್ತರ ಪಡೆಯುವುದು ಅತೀ ಅವಶ್ಯವಿರುತ್ತದೆ.

1. ವಾಹನ ಸಂ:ಕೆಎ-34-2175 ರಲ್ಲಿ ಸಾಗಾಣಿಕೆಯಾಗುತ್ತಿದ್ದ ವಸ್ತು ಸಾರಾಯಿ ಆಗಿದೆಯೇ? ಹೇಗೆ?
2. ಪ್ರಕರಣದಲ್ಲಿ ಜಪ್ತಿ ಮಾಡಿದ ವಾಹನ ಸಂ:ಕೆಎ-34-2175ನ್ನು ಅಬಕಾರಿ ಕಾಯಿದೆಯ ಉಲ್ಲಂಘನೆಗಾಗಿ ಬಳಸಿರುವುದು ಸಾಬೀತಾಗಿರುತ್ತದೆಯೇ? ಹೇಗೆ?
3. ವಾಹನದ ಮಾಲೀಕರು ವಾಹನವನ್ನು ಅಬಕಾರಿ ಕಾಯ್ದೆ ಉಲ್ಲಂಘನೆಗಾಗಿ ಉಪಯೋಗಿಸಬಾರದೆಂಬ ಬಗಗೆ ಮುಂಜಾಗ್ರತಾ ಕ್ರಮ ತೆಗೆದುಕೊಂಡಿದ್ದಾರೆಯೇ?
4. ಜಪ್ತಾದ ವಾಹನ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೇ? ಹೇಗೆ?

**1ನೇ ವಿವಾದಾಂಶಕ್ಕೆ ಉತ್ತರ:**

ಫಿರ್ಯಾದುದಾರರು ಜಪ್ತಿ ಮಾಡಿದ ವಾಹನದಲ್ಲಿದ್ದ ಸಾರಾಯಿ ಸ್ಯಾಚೆಟ್‌ಗಳಲ್ಲಿನ ಸಾರಾಯಿಯ ಮಾದರಿಯನ್ನು ಪಂಚರ ಸಮಕ್ಷಮ ತೆಗೆದು ಸೀಲ್ ಮಾಡಿ ಚೀಟಿಗಳನ್ನು ಮದ್ಯದ ಬಾಟಲಿಗಳಿಗೆ ಅಂಟಿಸಲಾಗಿರುತ್ತದೆ. ತನಿಖಾಧಿಕಾರಿಗಳು ಸಾರಾಯಿಯ ಮಾದರಿಗಳನ್ನು ದಿನಾಂಕ:29.11.1997 ರ ಪತ್ರದೊಂದಿಗೆ ಕೇಂದ್ರ ರಾಸಾಯನಿಕ ಪ್ರಯೋಗಾಲಯ ಇಲ್ಲಿಗೆ ರಾಸಾಯನಿಕ ಪರೀಕ್ಷೆಗೆ ಕಳುಹಿಸಿದ್ದು ದಿನಾಂಕ:4.12.1997ರ ರಾಸಾಯನಿಕ ವಿಶ್ಲೇಷಣೆ ವರದಿಯನ್ವಯ ಈ ಸಾರಾಯಿ ಸ್ಯಾಚೆಟ್‌ಗಳಲ್ಲಿ ಈಥೈಲ್ ಆಲ್ಕೋಹಾಲ್ ಅಂಶವಿದ್ದು ಸಾರಾಯಿಯು ಮಾನವ ಸೇವೆನೆಗೆ ಯೋಗ್ಯವಾಗಿದೆಯಾಗಿ ಮುಖ್ಯ ರಾಸಾಯನಿಕ ತಜ್ಞರು ದೃಢೀಕರಿಸಿರುತ್ತಾರೆ. ಅರ್ಜಿದಾರರ ಪರ ವಕೀಲರು ಸಾಕ್ಷಿಗಳ ವಿಚಾರಣೆ ಸಮಯದಲ್ಲಿ ಹಾಜರಿದ್ದು ಪಾಟೀ ಸವಾಲು ಮಾಡಿರುತ್ತಾರೆ. ಆದರೆ, ಜಪ್ತಿಯಾದ ವಾಹನದಲ್ಲಿ ಸಾಗಿಸುತ್ತಿದ್ದ ವಸ್ತು ಅಬಕಾರಿ ವಸ್ತುವಲ್ಲ ಎಂಬ ಅಂಶವನ್ನು ಅಲ್ಲಗಳೆದಿರುವುದಿಲ್ಲ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಜಪ್ತಾದ ವಾಹನದಲ್ಲಿ ಸಾಗಾಣಿಕೆ ಮಾಡುತ್ತಿದ್ದ ವಸ್ತು ಅಬಕಾರಿ ವಸ್ತು ಎಂದು ನಿಸ್ಸಂದೇಹವಾಗಿ ದೃಢಪಟ್ಟಿರುತ್ತದೆ. ಆದುದರಿಂದ, 1ನೇ ವಿವಾದಾಂಶಕ್ಕೆ ಉತ್ತರ ಹೌದು ಎಂದು ನಿರೂಪಿಸಿರುತ್ತದೆ.

**2ನೇ ವಿವಾದಾಂಶಕ್ಕೆ ಉತ್ತರ:**

ಈ ಪ್ರಕರಣದಲ್ಲಿ ಸಾಕ್ಷಿದಾರರಾದ ಎಂ. ಸೋಮಶೇಖರ್, ಅಬಕಾರಿ ಉಪ ನಿರೀಕ್ಷಕರು, ಹೊಸಪೇಟೆ ಉಪ ವಿಭಾಗ, ಇವರು 20-1-2004 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಹೇಳಿಕೆ ನೀಡುತ್ತಾ ದಿನಾಂಕ:3.9.1996 ರಂದು ರಸ್ತೆಕಾವಲು ಕಾಯಲು ಅಬಕಾರಿ

ನಿರೀಕ್ಷಕರೊಂದಿಗೆ ನೀಲಗುಂದ ಕ್ರಾಸ್‌ಗೆ ಹೋಗಿದ್ದು, ಅಲ್ಲಿರುವ ವಾಹನ ಸಂ.ಕೆಎ-34-2175ನ್ನು ಪರಿಶೀಲಿಸಿ ನೋಡಿದಾಗ ಅದರಲ್ಲಿ 172 ಚೀಲಗಳಿದ್ದು, ಪ್ರತಿ ಚೀಲಗಳಲ್ಲಿ 300 ಸಾರಾಯಿ ಪ್ಯಾಕೆಟುಗಳಿದ್ದು ಲಾರಿಯ ಚಾಲಕನನ್ನು ವಿಚಾರಿಸಲಾಗಿ ಯಾವುದೇ ರಹದಾರಿ ಹಾಗೂ ಇತರೆ ದಾಖಲಾತಿಗಳು ಇಲ್ಲವೆಂದು ಹೇಳಿರುತ್ತಾನೆ. ಸಾರಾಯಿ ಸ್ಯಾಚೆಟ್ ತುಂಬಿರುವ ಚೀಲಗಳಿಂದ ಪ್ಯಾಕೇಟ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ತೆಗೆದು ಸರ್ಕಾರಿ ಸೀಲುಗಳಿಂದ ಮೊಹರು ಮಾಡಿ ಪಂಚರ ಸಹಿಯನ್ನು ಚೀಟಿಗಳ ಮೇಲೆ ಪಡೆದು ಮಾದರಿಗಳಿದ್ದ ಕವರುಗಳ ಮೇಲೆ ಅಂಟಿಸಲಾಗಿತ್ತಾಗಿ ಹೇಳಿಕೆ ನೀಡಿರುತ್ತಾರೆ. ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಮಹಜರನ್ನು ಸ್ಥಳದಲ್ಲಿಯೇ ಬರೆಯಲಾಗಿದ್ದು, ಅದರ ಮೇಲೆ ಪಂಚರ ಸಹಿ ಪಡೆದಿದ್ದು ಪಂಚರನ್ನು ಕರೆದುಕೊಂಡು ಹೋಗಿಲ್ಲ ಹಾಗೂ ಸರ್ಕಾರಿ ಅಂಕಿ-ಅಂಶಗಳಿಗಾಗಿ ದೂರನ್ನು ದಾಖಲಿಸಿದೆ ಎಂಬುದು ಸುಳ್ಳು ಎಂದು ಹೇಳಿಕೆ ನೀಡಿರುತ್ತಾರೆ. ಈ ಪ್ರಕರಣದಲ್ಲಿನ ಆರೋಪಿ ಪರ ಇನ್ನೊಬ್ಬ ಸಾಕ್ಷಿದಾರರಾದ ಶ್ರೀ ಎಲ್. ಧರ್ಮನಾಯ್ಕ, ಅಂದಿನ ಅಬಕಾರಿ ಹಿರಿಯ ರಕ್ಷಕರು, ಹೊಸಪೇಟೆ ಉಪ ವಿಭಾಗ, ಇವರು ಈ ಪ್ರಾಧಿಕಾರದ ಮುಂದೆ ಹೇಳಿಕೆ ನೀಡುತ್ತಾ ಪಂಚರ ಸಮಕ್ಷಮ ಸಾರಾಯಿ ಪ್ಯಾಕೆಟ್‌ಗಳನ್ನು ಸಾಗಿಸುತ್ತಿದ್ದ ವಾಹನ ಸಂ.ಕೆಎ.34.2175 ನ್ನು ಜಪ್ತಿಮಾಡಿದ್ದು, ಸದರಿ ದಿನದಂದು ಮದ್ಯವನ್ನು ವಾಹನದೊಂದಿಗೆ ಜಪ್ತಿ ಮಾಡಿರುವುದು ಸತ್ಯವಾಗಿ ತಿಳಿಸಿರುತ್ತಾರೆ.

ವಾಹನದ ಮಾಲಿಕರಾದ ಎ. ರಾಮಕೃಷ್ಣ ಬಿನ್ ವೆಂಕಪ್ಪ, ವಾಹನದ ಚಾಲಕರು ಈ ಕೃತ್ಯವನ್ನು ಎಸಗಿದ್ದು ವಾಹನವನ್ನು ಮುಟ್ಟುಗೋಲು ಹಾಕಿಕೊಂಡರೆ ಜೀವನ ನಿರ್ವಹಣೆಗೆ ತೊಂದರೆಯಾಗುತ್ತದೆಯಾದ್ದರಿಂದ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳದೇ ಅವರ ವಶಕ್ಕೆ ಹಿಂದಿರುಗಿಸಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿನ ಸಾಕ್ಷಿದಾರರು ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆಯಾಗಿದ್ದು ಪಂಚರ ಸಮಕ್ಷಮ ಸಾರಾಯಿ ಪ್ಯಾಕೆಟ್‌ಗಳನ್ನು ಜಪ್ತಿಮಾಡಿರುವ ಬಗ್ಗೆ ಈ ಪ್ರಾಧಿಕಾರದ ಮುಂದೆ ಹೇಳಿಕೆ ನೀಡಿರುತ್ತಾರೆ. ಅರ್ಜಿದಾರರ ಪರ ವಕೀಲರು ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆಯಾಗಿಲ್ಲ ಎಂಬುದನ್ನು ನಿರೂಪಿಸಲು ಅಸಮರ್ಥರಾಗಿರುತ್ತಾರೆ. ಆದ್ದರಿಂದ, ಈ ಮೊಕದ್ದಮೆಯಲ್ಲಿ ಜಪ್ತಿಯಾದ ವಾಹನ ಸಂ. ಕೆಎ-34-2175 ರಲ್ಲಿ ಅಕ್ರಮವಾಗಿ ಸಾರಾಯಿ ಪ್ಯಾಕೇಟ್‌ಗಳನ್ನು ಸಾಗಾಣಿಕೆ ಮಾಡಿದ್ದು, ಅಬಕಾರಿ ಕಾಯ್ದೆ ಕಲಂಗಳ ಉಲ್ಲಂಘನೆಗಾಗಿ ವಾಹನವನ್ನು ಬಳಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ 2ನೇ ವಿವಾದಾಂಶಕ್ಕೆ ಉತ್ತರ ಹೌದು ಎಂದು ನಿರೂಪಿಸಿರುತ್ತೇನೆ.

**3ನೇ ವಿವಾದಾಂಶಕ್ಕೆ ಉತ್ತರ:**

ವಾಹನದ ಮಾಲಿಕರು ಮತ್ತು ಅವರ ಪರ ವಕೀಲರು ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಟದ ವಿಷಯ ಅವರಿಗೆ ತಿಳಿದಿರುವುದಿಲ್ಲವೆಂದು ಮತ್ತು ಅವರು ನಿರ್ಧೋಷಿ ಎಂದು ಸಾಬೀತುಪಡಿಸುವ ಹೊಣೆಗಾರಿಕೆ ವಾಹನದ ಮಾಲಿಕರ ಮೇಲಿರುತ್ತದೆ. ವಾಹದ ಮಾಲಿಕರಿಗೆ ಈ ಪ್ರಾಧಿಕಾರವು ಅಬಕಾರಿ ಕಾಯ್ದೆಯನ್ವಯ ನೋಟೀಸು ನೀಡಿದರೂ ಅಕ್ರಮವಾಗಿ ವಾಹನದಲ್ಲಿ ಸಾರಾಯಿ ಸಾಗಾಣಿಕೆಯಾಗದಂತೆ ಮುಂಜಾಗ್ರತೆ ಕೈಗೊಂಡ ಬಗ್ಗೆ ಈ ಪ್ರಾಧಿಕಾರಕ್ಕೆ ಮನವರಿಕೆ ಮಾಡಲು ಯಾವುದೇ ಅಗತ್ಯ ದಾಖಲಾತಿಗಳನ್ನು ಸಲ್ಲಿಸಿರುವುದಿಲ್ಲ. ಹಾಗೂ ಸಾಕ್ಷಿ ಹೇಳಿಕೆಗಳನ್ನು ನೀಡಿರುವುದಿಲ್ಲ. ಆದ್ದರಿಂದ, ವಾಹನದಲ್ಲಿ ಮಾಲಿಕರು ಅಬಕಾರಿ ಕಾಯ್ದೆ ಉಲ್ಲಂಘನೆಗಾಗಿ ವಾಹನವನ್ನು ಉಪಯೋಗಿಸಬಾರದೆಂಬ ಬಗ್ಗೆ ಮುಂಜಾಗ್ರತ ಕ್ರಮ ತೆಗೆದುಕೊಂಡಿಲ್ಲದಿರುವುದು ಈ ಪ್ರಾಧಿಕಾರಕ್ಕೆ ಸಂಪೂರ್ಣವಾಗಿ ದೃಢಪಟ್ಟಿರುತ್ತದೆ. ಆದುದರಿಂದ, 3ನೇ ವಿವಾದಾಂಶಕ್ಕೆ ಉತ್ತರ ಹೌದು ಎಂದು ನಿರೂಪಿಸಿರುತ್ತೇನೆ.

ಈ ಪ್ರಾಧಿಕಾರದ ಮುಂದೆ ಹಾಜರಿದ್ದ ಸಹಾಯಕ ಅಭಿಯೋಜಕ ನಿರ್ದೇಶಕರು ಮತ್ತು ಅರ್ಜಿದಾರರ ಪರ ವಕೀಲರ ವಾದ-ವಿವಾದವನ್ನು ಆಲಿಸಲಾಯಿತು. ಅರ್ಜಿದಾರರ ಪರ ವಕೀಲರು ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಬೆಟ್‌ಗಳು ಸಾಗಾಣಿಕೆಯಾಗಲಿಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ. ಸಹಾಯಕ ಅಭಿಯೋಜಕ ನಿರ್ದೇಶಕರು ವಾದ ಮಂಡಿಸುತ್ತಾ ಈಗಾಗಲೇ ಈ ಪ್ರಕರಣದಲ್ಲಿನ ಸಾಕ್ಷಿ ವಿಚಾರಣೆ ಮಾಡಿದ್ದು ಸದರಿ ಸಾಕ್ಷಿ ವಿಚಾರಣೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದಲ್ಲಿ ಅಕ್ರಮವಾಗಿ ಸಾರಾಯಿಯು ಸಾಗಾಣಿಕೆಯಾಗಿದೆ ಎಂಬ ಬಗ್ಗೆ ಸ್ಪಷ್ಟವಾದ ಚಿತ್ರಣ ನೀಡಿ ಈ ಪ್ರಾಧಿಕಾರಕ್ಕೆ ಮನವರಿಕೆ ಮಾಡಿರುತ್ತಾರೆ. ಆದ್ದರಿಂದ, ಈ ಪ್ರಾಧಿಕಾರವು ಸಹಾಯಕ ಅಭಿಯೋಜಕ ನಿರ್ದೇಶಕರ ವಾದದಲ್ಲಿ ಸತ್ಯಾಂಶವಿದೆ ಎಂದು ಭಾವಿಸಿದೆ.

ಅರ್ಜಿದಾರರ ಪರ ವಕೀಲರು ಹಾಗೂ ಸಹಾಯಕ ಅಭಿಯೋಜಕ ನಿರ್ದೇಶಕರು ವಾದ-ವಿವಾದಗಳನ್ನು ಸಂಪೂರ್ಣವಾಗಿ ಆಲಿಸಲಾಗಿ ಈ ಪ್ರಕರಣದಲ್ಲಿ ಅರ್ಜಿದಾರರು ಸರ್ಕಾರದ ಆದಾಯಕ್ಕೆ ವಂಚನೆ ಮಾಡಿ ಅಕ್ರಮವಾಗಿ ಸಾರಾಯಿ ಸ್ಯಾಬೆಟ್‌ಗಳನ್ನು ಸಾಗಾಣಿಕೆ ಮಾಡಿರುವುದು ದೃಢಪಟ್ಟಿರುತ್ತದೆ. ಅಲ್ಲದೇ ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಎಲ್ಲಾ ಕಾರಣಗಳಿಂದ ಪ್ರಕರಣಗಳಿಂದ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಮನವರಿಕೆಯಾದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಇಎಕ್ಸ್‌ಇ:ಡಿಟಿಸಿಆರ್:85:96-97, ದಿನಾಂಕ: 29ನೇ ಮೇ 2007**

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಯ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಹರಪನಹಳ್ಳಿ ಉಪವಿಭಾಗ, ಇವರು ದಾಖಲಿಸಿದ ಗುನ್ನೆ ಸಂಖ್ಯೆ:ಆಇ:ಉವಿ:ಹ.ಹಳ್ಳಿ:2:96-97, ದಿ:3.9.1996ರ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಟಾಟಾ ವ್ಯಾನು ಸಂಖ್ಯೆ:ಕೆಎ-34-2175ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿರುತ್ತೇನೆ. ಈ ಪ್ರಕರಣದಲ್ಲಿ ವಶಪಡಿಸಿಕೊಂಡ 5160 ಲೀಟರ್ ಸಾರಾಯಿಯನ್ನು ವಿಲೇಮಾಡಿದ ಕ್ರಮವನ್ನು ಸಿಂಧುತ್ವಗೊಳಿಸಲಾಗಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:29.5.2007 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಇ.ಐ.ಬಿ. ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 736

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದಾವಣಗೆರೆ ಜಿಲ್ಲೆ,**
**ದಾವಣಗೆರೆ ಇವರ ನ್ಯಾಯಾಲಯದಲ್ಲಿ**

**ಫಿರ್ಯಾದುದಾರರು:**
ಅಬಕಾರಿ ಉಪ ನಿರೀಕ್ಷಕರು,
ಜಗಳೂರು ಉಪವಲಯ.

**ಪ್ರತಿನಿಧಿಸುವವರು:**
ಸಹಾಯಕ ಅಭಿಯೋಗ ನಿರ್ದೇಶಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ವಿರುದ್ಧ**

**ಆರೋಪಿತರು:**
ಆರ್.ಎಲ್. ವಿಜಯಕುಮಾರ್ ಬಿನ್ ಲಕ್ಷ್ಮಣಪ್ಪ,
ತನು ನಿಂಗಮ್ಮ ನಿಲಯ, ದಾದಾ ಗ್ಯಾರೇಜ್ ಮುಂಭಾಗ,
ಸಂತೇಮೈದಾನ, ಚಿತ್ರದುರ್ಗ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:14-10:1997 ರಂದು ಅಕ್ರಮವಾಗಿ ಪರವಾನಿಗೆಯಿಲ್ಲದೆ ಮದ್ಯ ಸಾಗಾಣಿಕೆಯಾಗುತ್ತಿದೆ ಎಂಬ ಭಾತ್ಮಿಯ ಮೇರೆಗೆ ಪಂಚರನ್ನು ಬರಮಾಡಿಕೊಂಡು ಜಗಳೂರು ತಾಲ್ಲೂಕು ತೋರಣಘಟ್ಟ ಸಮೀಪ ರಸ್ತೆ ಕಾವಲು ಕಾಯುತ್ತಿದ್ದಾಗ ಅಂದು ರಾತ್ರಿ ಸುಮಾರು 10.30 ಗಂಟೆಗೆ ಬಂದ ವಾಹನ ಸಂ.ಎಂ.ಇ.ಯು.414 ಅಂಬಾಸಿಡರ್ ಕಾರನ್ನು ತಡೆದು ನಿಲ್ಲಿಸಿ ತಪಾಸಣೆ: ಮಾಡಿ ನೋಡಲಾಗಿ ಅದರಲ್ಲಿ ಪ್ರತಿ ಪೆಟ್ಟಿಗೆಗಳಲ್ಲಿ 180 ಮಿಲಿಯ 48 ಬಾಟಲಿಗಳಂತೆ 20 ಪೆಟ್ಟಿಗೆಗಳಲ್ಲಿ ರಾಯಲ್ ಡಿಲಕ್ಸ್ ವಿಸ್ಕಿ ಹಾಗೂ ಪ್ರತಿ ಪೆಟ್ಟಿಗೆಗಳಲ್ಲಿ 180 ಮಿಲಿಯ 48 ಬಾಟಲಿಗಳಂತೆ 3 ಪೆಟ್ಟಿಗೆ ತಾಜ್ ವಿಸ್ಕಿ ಬಾಟಲಿಗಳಿದ್ದು ಆರೋಪಿಯು ತಪ್ಪಿಸಿಕೊಂಡಿದ್ದು, ವಾಹನವನ್ನು ಪೂರ್ಣವಾಗಿ ಪರಿಶೀಲಿಸಿದಾಗ ಈ ಮದ್ಯವನ್ನು ಸಾಗಿಸಲು ಯಾವುದೇ ರಹದಾರಿ ದೊರೆಯದೆ ಇದ್ದುದರಿಂದ ವಾಹನದಲ್ಲಿನ ಮದ್ಯದಲ್ಲಿನ ಪ್ರತಿ ಬ್ರಾಂಡ್‌ನಿಂದ ಒಂದೊಂದು ಬಾಟಲಿಯನ್ನು ರಾಸಾಯನಿಕ ಪರೀಕ್ಷೆಗೆ ಪಂಚರ ಸಮಕ್ಷಮದಲ್ಲಿ ಮಾದರಿಯನ್ನು ತೆಗೆದು ಅವರುಗಳ ಸಹಿಯನ್ನು ಪಡೆದು ವಾಹನದೊಂದಿಗೆ ಮದ್ಯವನ್ನು ಜಪ್ತಿ ಮಾಡಲಾಯಿತು. ಈ ಬಗ್ಗೆ ಫಿರ್ಯಾದಿಯು ಗುನ್ಹೆ ಸಂಖ್ಯೆ: ಅಸಇ:ಜಿಎಲ್‌ಆರ್:7:97-98 ರನ್ವಯ ಪ್ರಕರಣ ದಾಖಲಿಸಿ, ಈ ಪ್ರಾಧಿಕಾರಕ್ಕೆ ಪ್ರಥಮ ವರ್ತಮಾನ ವರದಿ, ಸ್ವತ್ತಿನ ಪಟ್ಟಿ ಮತ್ತು ಜಪ್ತಿ ಪಂಚನಾಮೆಯನ್ನು ಸಲ್ಲಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಚಿತ್ರದುರ್ಗ ಇವರು ನೀಡಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ ವಾಹನವು ಶ್ರೀ ಆರ್.ಎಲ್. ವಿಜಯ್‌ಕುಮಾರ್ ಬಿನ್ ಲಕ್ಷ್ಮಣಪ್ಪ ಇವರ ಹೆಸರಿನಲ್ಲಿ ಇರುವುದಾಗಿ ತಿಳಿದು ಬಂದಿರುತ್ತದೆ.

ತನಿಖಾಧಿಕಾರಿಗಳು ದಿನಾಂಕ:4.11.1997ರ ಪತ್ರದೊಂದಿಗೆ ಸಲ್ಲಿಸಿದ ರಾಸಾಯನಿಕ ತಜ್ಞರ ವರದಿಯನ್ನು ಪರಿಶೀಲಿಸಲಾಗಿ ಜಪ್ತಿಮಾಡಿದ ದ್ರವದಲ್ಲಿ ಮದ್ಯದ ಇರುವಿಕೆಯಲ್ಲಿರುವುದು ಧೃಢಪಟ್ಟಿರುತ್ತದೆ.

ಈ ಪ್ರಾಧಿಕಾರವು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಬಿ) ಯ ಅಚಡಿ ಅಡಿಯಲ್ಲಿ ವಾಹನದ ಮಾಲಿಕನಿಗೆ ಕಾರಣ ಕೇಳು ನೋಟೀಸನ್ನು ನೀಡಿ ದಿನಾಂಕ:31.10.1997 ರಂದು ಅವರಿಗೆ ಜಾರಿಗೊಳಿಸಲಾಗಿತ್ತು. ನಂತರ ವಾಹನದ ಮಾಲಿಕರಾದ ಆರ್‌ಎಲ್. ವಿಜಯ್‌ಕುಮಾರ್ ಬಿನ್ ಲಕ್ಷ್ಮಣಪ್ಪ ಇವರು ಈ ಪ್ರಾಧಿಕಾರಕ್ಕೆ ಶ್ರೀ ಪಾತ್ಯರಾಜನ್, ವಕೀಲರು, ಚಿತ್ರದುರ್ಗ, ಇವರ ಮೂಲಕ ಅರ್ಜಿ ಸಲ್ಲಿಸಿ ಜಪ್ತಿ ಮಾಡಿದ ವಾಹನವನ್ನು ಮಧ್ಯಂತರ ಆದೇಶದ ಮೇರೆಗೆ ಬಿಡುಗಡೆಗೊಳಿಸಲು ಕೋರಿರುತ್ತಾರೆ. ಅವರ ಅರ್ಜಿಯನ್ನು ಪರಿಶೀಲಿಸಿದ ಈ ಪ್ರಾಧಿಕಾರವು ವಾಹನದ ಮಾಲಿಕರು 1,00,000-00 ರೂ.ಗಳ ಮೊತ್ತದ ಭದ್ರತೆಯನ್ನು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಸಲ್ಲಿಸಿದಲ್ಲಿ ಹಾಗೂ ಇತರೆ ಕೆಲವು ಷರತ್ತುಗಳನ್ನು ಪೂರೈಸಿದಲ್ಲಿ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡ ಮಾಡುವುದಾಗಿ ಆದೇಶ ನೀಡಲಾಗಿತ್ತು. ಈ ಪ್ರಾಧಿಕಾರದ ಮಧ್ಯಂತರ ಆಧೇಶದ ವಿರುದ್ಧ ಅರ್ಜಿದಾರರು ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲ್ ಸಂ.85:97 ರಲ್ಲಿ ಮೇಲ್ಮನವಿಯನ್ನು ಸಲ್ಲಿಸಿದ್ದರು. ಮಾನ್ಯ ನ್ಯಾಯಾಲಯವು ದಿನಾಂಕ:19.12.1997 ರಂದು ನೀಡಿದ ತೀರ್ಪಿನಲ್ಲಿ ಈ ಪ್ರಾಧಿಕಾರವು ಬ್ಯಾಂಕ್ ಗ್ಯಾರಂಟಿ ಸಲ್ಲಿಸಬೇಕೆಂದು ವಿಧಿಸಿರುವ ಷರತ್ತನ್ನು ತಳ್ಳಿಹಾಕಿ 1,00,000-00 ರೂ.ಗಳ ನಷ್ಟಭರ್ತಿ ಪ್ರಮಾಣ ಪತ್ರ ಪಡೆದು ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆಗೊಳಿಸಲು ಆದೇಶಿಸಿರುತ್ತಾರೆ. ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಆದೇಶದಂತೆ ಅರ್ಜಿದಾರರು ದಿನಾಂಕ:22.12.97 ರಲ್ಲಿ 1,00,000-00 ರೂ.ಗಳ ನಷ್ಟಭರ್ತಿ ಪ್ರಮಾಣ ಪತ್ರ ನೀಡಿದ್ದರಿಂದ ಈ ಪ್ರಾಧಿಕಾರದ ದಿನಾಂಕ:26.12.1997 ರ ಆದೇಶದಲ್ಲಿ ವಾಹನವನ್ನು ತಾತ್ಕಾಲಿಕವಾಗಿ ಮಾಲಿಕರ ವಶಕ್ಕೆ ಬಿಡುಗಡೆಗೊಳಿಸಲು ಆದೇಶಿಸಲಾಗಿತ್ತು.

ಈ ಪ್ರಕರಣದಲ್ಲಿನ ಫಿರ್ಯಾದುದಾರರಾದ ಗೋಪಾಲಕೃಷ್ಣರೆಡ್ಡಿ, ಅಂದಿನ ಅಬಕಾರಿ ಉಪ ನಿರೀಕ್ಷಕರು, ಇವರ ದಿನಾಂಕ:4.1.2000 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡುತ್ತಾ ಅವರು ಜಗಳೂರು ಉಪ ವಲಯದ ಅಬಕಾರಿ ಉಪ ನಿರೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ:14.10.1997 ರಂದು ಮದ್ಯ ಕಳ್ಳ ಸಾಗಾಣಿಕೆಯಾಗುತ್ತಿದೆಯೆಂದು ಬಂದ ಮಾಹಿತಿಯ ಮೇರೆಗೆ ಪಂಚರನ್ನು ಬರಮಾಡಿಕೊಂಡು ಸಿಬ್ಬಂದಿಯೊಂದಿಗೆ ರಸ್ತೆ ಕಾವಲು ಕಾಯುತ್ತಿದ್ದಾಗ ಜಗಳೂರು ತಾಲ್ಲೂಕು ತೋರಣಘಟ್ಟದಿಂದ 1 ಕಿ.ಮೀ. ದೂರದ ಕೂಡು ರಸ್ತೆಯಲ್ಲಿ ಒಂದು ಕಾರು ನಿಂತಿದ್ದು ಅನುಮಾನವರಿ ಹತ್ತಿರ ಹೋದಾಗ ಆರೋಪಿಗಳು ಓಡಿ ಹೋಗಿದ್ದು ಆ ಕಾರನ್ನು ಪರಿಶೀಲಿಸಿ ನೋಡಿದಾಗ 23 ಪೆಟ್ಟಿಗೆಗಳಲ್ಲಿ ಮದ್ಯದ ಬಾಟಲಿಗಳಿದ್ದು ಆ ಮದ್ಯದಲ್ಲಿ 20 ಪೆಟ್ಟಿಗೆ ರಾಯಲ್ ಡಿಲಕ್ಸ್ ವಿಸ್ಕಿ ಹಾಗೂ ಉಳಿದ 3 ಪೆಟ್ಟಿಗೆಗಳಲ್ಲಿ ತಾಜ್ ವಿಸ್ಕಿ ಇದ್ದು ಮದ್ಯದ ಬಾಟಲಿಗಳಿಂದ ಮದ್ಯದ ಮಾದರಿಯನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಪಂಚರ ಸಹಿ ಪಡೆದು ಸೀಲ್ ಮಾಡಿ ಚೀಟಿಗಳ ಮೇಲೆ ಅಂಟಿಸಲಾಯಿತು. ಹಾಗೂ ಸ್ಥಳದಲ್ಲಿ ಮಹಜರ್ ಮಾಡಿ ಕಾರ್ ಸಂ.ಎಂ.ಇ.ಯು.414ನ್ನು ಮದ್ಯದೊಂದಿಗೆ ಜಪ್ತಿಮಾಡಿ ಮೊಕದ್ದಮೆಯನ್ನು ಸಂಖ್ಯೆ:ಅಸಇ:ಜಿಎಲ್‌ಆರ್:7:97-98, ದಿನಾಂಕ:14.10.1997 ರನ್ವಯ ದಾಖಲಿಸಿಕೊಳ್ಳಲಾಯಿತಾಗಿ ಹೇಳಿಕೆ ನೀಡಿರುತ್ತಾರೆ.

ವಾಹನದ ಮಾಲಿಕರಿಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಲು ಅನೇಕ ಬಾರಿ ನೋಟೀಸು ನೀಡಿದಾಗ್ಯೂ ಅವರು ಹಾಜರಾಗಿರುವುದಿಲ್ಲ. ಅಂತಿಮವಾಗಿ ದಿನಾಂಕ:3.5.2007 ರಂದು ಪ್ರಾಧಿಕಾರದ ಮುಂದೆ ಹಾಜರಾಗಿ ಮುಂದಿನ ವಿಚಾರಣೆ ದಿನಾಂಕದಂದು ಅಂದರೆ 17.5.2007 ರಂದು ವಾಹನವನ್ನು ಪ್ರಾಧಿಕಾರದ ಮುಂದೆ ಹಾರುಪಡಿಸಲು ತಿಳಿಸಿದ್ದು ಅವರು ಒಪ್ಪಿಕೊಂಡಂತೆ ವಾಹನವನ್ನು ಹಾಜರುಪಡಿಸಿರುವುದಿಲ್ಲ. ಈ ಪ್ರಕರಣದಲ್ಲಿ ವಾಹನವನ್ನು ದಿನಾಂಕ:14.10.97 ರಂದು ಜಪ್ತಿ ಮಾಡಿದ್ದು ಸುಮಾರು 10 ವರ್ಷಗಳು ಸಮೀಪಿಸುತ್ತಿದ್ದು ವಾಹನದ ಮಾಲಿಕರು ಈ ಪ್ರಕರಣದ ಬಗ್ಗೆ ಆಸಕ್ತಿ ತೋರಿಸುತ್ತಿಲ್ಲ. ಈ ಪ್ರಕರಣ ವಿಳಂಬವಾಗಿದ್ದು ಇದನ್ನು ಇನ್ನು ಮುಂದುವರಿಸುವುದು ಸೂಕ್ತವೆಂದು ಕಂಡು ಬರುತ್ತಿಲ್ಲವಾದ್ದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮುಂದಿನ ಕ್ರಮ ಜರುಗಿಸಬಹುದೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಇಎಕ್ಸ್‌ಇ:ಡಿಟಿಸಿಆರ್:291:97-98, ದಿನಾಂಕ: 29ನೇ ಮೇ 2007**

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1985 ಕಲಂ 43 (ಎ) ಯ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಜಗಳೂರು ಉಪ ವಲಯ, ಇವರು ದಾಖಲಿಸಿದ ಗುನ್ಹೆ ಸಂಖ್ಯೆ: ಅಸಇ:ಬಿಎಲ್‌ಆರ್:7:97-98, ದಿನಾಂಕ:14.10.1997 ರ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂ.ಎಂ.ಇ.ಯು.414ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿರುತ್ತೇನೆ. ಈ ಪ್ರಕರಣದಲ್ಲಿ ವಶಪಡಿಸಿಕೊಂಡ 197.720 ಲೀ. ಮದ್ಯವನ್ನು ವಿಲೇಮಾಡಿದ ಕ್ರಮವನ್ನು ಸಿಂಧುತ್ವಗೊಳಿಸಲಾಗಿದೆ.

ಈ ಆದೇಶವನ್ನು ಇಂದು ಅಂದರೆ ದಿ:29.5.2007 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಇ.ಐ.ಬಿ. ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 737

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖಾ ನಿರ್ದೇಶಕರ ಕಛೇರಿಯ ನಡವಳಿಗಳು ಬೆಂಗಳೂರು**

**ವಿಷಯ:** ಶ್ರೀ ಎಂ.ಎಂ. ಸತ್ತಿಗೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಕೆ.ಜಿ.ಎಫ್., ಇವರ ಅಮಾನತ್ತಿನ ಆದೇಶವನ್ನು ರದ್ದುಗೊಳಿಸುವ ಬಗ್ಗೆ -

**ಉಲ್ಲೇಖ:**
1. ಸರ್ಕಾರಿ ಅಭಿಯೋಜಕರು, ಕೋಲಾರ, ಅವರ ಪತ್ರ ಸಂಖ್ಯೆ:ಸಅ:ಕೋ:100:06-07, ದಿನಾಂಕ:26.4.07.
2. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಅವರ ಪತ್ರ ಸಂಖ್ಯೆ: ಲೋಕ್: ತನಿಖೆ(ಸಾ)13:ಸಿಆರ್-5:ಎಸ್:06:ಕೆಎಲ್‌ಆರ್, ದಿನಾಂಕ:26.4.2006.
3. ಈ ಕಛೇರಿಯ ಸಮಸಂಖ್ಯೆಯ ಆದೇಶ ದಿನಾಂಕ: 3.5.2006.
4. ಅಮಾನತ್ತಿನ ಆದೇಶವನ್ನು ತೆರವುಗೊಳಿಸಿ ಸ್ಥಳ ನಿಯುಕ್ತಿಗೊಳಿಸಲು ವಿನಂತಿಸಿ ಈ ಕಛೇರಿಗೆ ಸಲ್ಲಿಸಿರುವ ಅಧಿಕಾರಿಯವರ ಮನವಿ ದಿನಾಂಕ: 5.4.2007.

**ಪ್ರಸ್ತಾವನೆ:**

ಸರ್ಕಾರಿ ಅಭಿಯೋಜಕರು, ಕೋಲಾರ, ಅವರು ಉಲ್ಲೇಖ (1)ರ ಪತ್ರದಲ್ಲಿ ಶ್ರೀ ಎಂ.ಎಂ. ಸತ್ತಿಗೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೆ.ಜಿ.ಎಫ್., ಇವರು ಸಹಾಯಕ ಸರ್ಕಾರಿ ಅಭಿಯೋಜಕರು, ಬಂಗಾರಪೇಟೆ, ಹುದ್ದೆಯಲ್ಲಿ ಹೆಚ್ಚುವರಿ ಪ್ರಭಾರವನ್ನು ನಿರ್ವಹಿಸುತ್ತಿದ್ದಾಗ, ಕರ್ನಾಟಕ ಲೋಕಾಯುಕ್ತ ಪೊಲೀಸರು ದಿನಾಂಕ:24.4.2006ರಂದು ಲಂಚ ನಿರೋಧ ಕಾಯಿದೆ 1988ರ ಕಲಂ 7,13(1)(ಡಿ) ರ್.ವಿ. 13(2)ರ ಅಡಿಯಲ್ಲಿ ಮೊಕದ್ದಮೆ ಸಂಖ್ಯೆ: 5:06ರ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆ ನಡೆಸುತ್ತಿರುವ ಬಗ್ಗೆ ಈ ಕಛೇರಿಗೆ ವರದಿಯನ್ನು, ಅಭಿಯೋಗ ಉಪನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು, ಅವರ ಮುಖಾಂತರ ಅಡಕ ಪತ್ರಗಳೊಂದಿಗೆ ಸಲ್ಲಿಸಿದ್ದು, ಇದಕ್ಕೆ ಪೂರಕವಾಗಿ, ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಅವರು ಉಲ್ಲೇಖ (2)ರ ಪತ್ರದಲ್ಲಿ, ಸದರಿಯವರ ವಿರುದ್ಧ ಲೋಕಾಯುಕ್ತ ಪೊಲೀಸರು ಹೂಡಿರುವ ಮೊಕದ್ದಮೆಯ ಬಗ್ಗೆ ವಿವರಗಳನ್ನು ನೀಡಿದ್ದು ಹಾಗೂ ಸದರಿಯವರನ್ನು ದಿನಾಂಕ:24.4.2006ರಂದು ಬಂಧಿಸಿ, ಕ್ರಮ ಕೈಗೊಂಡಿದ್ದು, ಕೆ.ಸಿ.ಎಸ್. (ಸಿಸಿಎ) ನಿಯಮ 1957ರ ನಿಯಮ 10ರ ಪ್ರಕಾರ, ಅಪರಾಧ ಎಸಗಿದ್ದರಿಂದ, ಅವರನ್ನು ಸದರಿ ದಿನಾಂಕದಿಂದ ಅಮಾನತ್ತಿನಲ್ಲಿಡುವಂತೆ ಶಿಫಾರಸ್ ಮಾಡಿರುತ್ತಾರೆ. ಸದರಿ ಶಿಫಾರಸ್ ಪ್ರಕಾರ, ಸದರಿಯವರನ್ನು ಈ ಕಛೇರಿಯ ಉಲ್ಲೇಖ (3)ರ ಆದೇಶದಲ್ಲಿ ಅಮಾನತ್ತಿನಲ್ಲಿರಿಸಿ ಆದೇಶಿಸಲಾಗಿರುತ್ತದೆ ಹಾಗೂ ಅಮಾತ್ತಿನ ಅವಧಿಯಲ್ಲಿ ನಿಯಮಾನುಸಾರ ಭತ್ಯೆಯನ್ನು (ಜೀವನಾಧಾರ ಭತ್ಯೆ) ಪಡೆಯಲು ಆದೇಶಿಸಲಾಗಿರುತ್ತದೆ. ಸದರಿ ಅಧಿಕಾರಿಯವರು ಈ ಕಛೇರಿಗೆ ಸಲ್ಲಿಸಿರುವ ಉಲ್ಲೇಖ (4)ರ ಮನವಿಯಲ್ಲಿ, ಅವರನ್ನು ಮೇಲ್ಕಂಡಂತೆ ನಿಲಂಬನದಲ್ಲಿರಿಸಿ 01 ವರ್ಷ ಪೂರ್ಣಗೊಂಡಿದ್ದು, ಲೋಕಾಯುಕ್ತ ಪೊಲೀಸರು ಪ್ರಕರಣದ ತನಿಖೆಯನ್ನು ನಡೆಸಿ, ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸುವುದು ಮಾತ್ರ ಬಾಕಿ ಇರುವುದಾಗಿ ನಿವೇದಿಸಿರುತ್ತಾರೆ ಹಾಗೂ ಅವರ ನಿಲಂಬನಾ ಅವಧಿಯಲ್ಲಿ ಅರ್ಧ ಸಂಬಳ ಮಾತ್ರ ಸಿಗುತ್ತಿದ್ದು, ಪ್ರಕರಣವು ಇತ್ಯರ್ಥವಾಗದೆ, ಹೆಚ್ಚಿನ ಸಮಯವಾಗಿರುವುದರಿಂದ, ಅವರು ಈಗ ಪಡೆಯುತ್ತಿರುವ ಸಂಬಳವು ಅವರ ಕುಟುಂಬ ನಿರ್ವಹಣೆಗೆ ಸಾಕಾಗುತ್ತಿಲ್ಲವಾದ ಕಾರಣ, ಆರ್ಥಿಕವಾಗಿ ಬಹಳ ತೊಂದರೆಯಾಗಿರುವ ಬಗ್ಗೆ ನಮೂದಿಸಿ, ವಿನಂತಿಸಿದ್ದು, ಸದರಿ ಕಾರಣಗಳಿಂದ, ಅವರ ಮನವಿಯನ್ನು ಪರಿಗಣಿಸಿ, ಅಮಾನತ್ತಿನ ಆದೇಶವನ್ನು ರದ್ದುಪಡಿಸಲು ಹಾಗೂ ಅಮಾನತ್ತಿನ ಅವಧಿಯು 06 ತಿಂಗಳಿಗಿಂತ ಹೆಚ್ಚಿನ ಅವಧಿಯಾಗಿದ್ದರಿಂದ, ನಿಯಮಾನುಸಾರ ಜೀವನಾಧಾರ ಭತ್ಯೆಯನ್ನು ಶೇಕಡಾ 50 ರಿಂದ 75ಕ್ಕೆ ಹೆಚ್ಚಿಸಲು ಹಾಗೂ ಅವರಿಗೆ ಸ್ಥಳನಿಯುಕ್ತಿಗೊಳಿಸುವ ಕುರಿತಂತೆ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ:ಡಿಪಿಎನ್:ಸಿಶಾ-1:15:2006-07, ಬೆಂಗಳೂರು, ದಿನಾಂಕ: 28ನೇ ಮೇ 2007**

ಶ್ರೀ ಎಂ.ಎಂ. ಸತ್ತಿಗೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೆ.ಜಿ.ಎಫ್., (ನಿಲಂಬನೆಯಲ್ಲಿರುವವರು) ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ ಪೊಲೀಸರು ಹೂಡಿರುವ ಲಂಚ ನಿರೋಧ ಪ್ರಕರಣದ ತೀರ್ಪಿಗೆ ಒಳಪಟ್ಟು ಹಾಗೂ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ, ಇವರ ಅಮಾನತ್ತು ಆದೇಶವನ್ನು, ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಾವಳಿಗಳು 1957ರ 10ನೇ ನಿಯಮದ 5ನೇ ಉಪನಿಯಮ, ಕಂಡಿಕೆ (ಸಿ)ರ ಅನ್ವಯ, ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ದಿನಾಂಕ:23.10.2006 ರಿಂದ ಅನ್ವಯವಾಗುವಂತೆ, ಇವರ ಜೀವನಾಧಾರ ಭತ್ಯೆಯನ್ನು ಶೇಕಡಾ 50 ರಿಂದ 75ಕ್ಕೆ ಹೆಚ್ಚಿಸಿ, ಅಮಾನತ್ತಿನ ಆದೇಶವನ್ನು ರದ್ದುಪಡಿಸಿದ ದಿನಾಂಕದವರೆಗೆ ಪಡೆಯಲು ಆದೇಶಿಸಲಾಗಿದೆ.

ಸದರಿ ಅಧಿಕಾರಿಯವರನ್ನು ಹಾಲಿ ಖಾಲಿ ಇರುವ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಭಾಲ್ಕಿ, ಹುದ್ದೆಗೆ ಮುಂದಿನ ಆದೇಶದವರೆಗೆ ಪುನರ್ ನೇಮಿಸಲಾಗಿದೆ.

**ಸದಾಶಿವಮೂರ್ತಿ**
ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು.

ಪಿ.ಆರ್. 738

ಸದರಿ ವ್ಯಾಸಂಗಕ್ಕೆ ಅರ್ಜಿಯನ್ನು ಸಲ್ಲಿಸಲು ಇಚ್ಛಿಸುವ ಇಲಾಖಾ ನೌಕರರು ನಿಗದಿತ ಅರ್ಜಿಯನ್ನು ಪ್ರಾಂಶುಪಾಲರು ಕಛೇರಿ, ಶುಶ್ರೂಷಾ ಮಹಾವಿದ್ಯಾಲಯ, ಬೆಂಗಳೂರು ಇವರಿಂದ ರೂ.100/- ನಗದು ಪಾವತಿ ಮಾಡಿ ಪಡೆಯಬಹುದಾಗಿದೆ.

ಅಂಚೆ ಮೂಲಕ ಪಡೆಯ ಬಯಸುವವರು ರೂ. 100/- ರ ಹುಂಡಿಯನ್ನು ಪ್ರಾಂಶುಪಾಲರು, ಸರ್ಕಾರಿ ಶುಶ್ರೂಷಾ ಮಹಾವಿದ್ಯಾಲಯ, ಕೋಟೆ, ಬೆಂಗಳೂರು ಇವರಿಗೆ ಅಂಚೆ ಚೀಟಿ ಹಚ್ಚಿದ ಸ್ವವಿಳಾಸ 24 x 12 ಸೆ.ಮಿ. ಅಳತೆಯ ಲಕೋಟೆಯನ್ನು ಕಳುಹಿಸಿ ಅರ್ಜಿಯನ್ನು ಪಡೆಯಬಹುದಾಗಿದೆ.

ಸದರಿ ಅರ್ಜಿ ನಮೂನೆಯನ್ನು ದಿನಾಂಕ: 20.6.2007 ರಿಂದ 5.7.2007 ರವರೆಗೆ ಬೆಳಿಗ್ಗೆ 11.00 ಗಂಟೆಯಿಂದ ಮಧ್ಯಾಹ್ನ 4.00 ಗಂಟೆಯವರೆಗೆ ಎಲ್ಲಾ ಕೆಲಸದ ದಿನಗಳಲ್ಲಿ ಪಡೆಯಬಹುದಾಗಿದೆ. ಅರ್ಜಿಯೊಂದಿಗೆ ಅಭ್ಯರ್ಥಿಯು ತಮ್ಮ ವಿದ್ಯಾಭ್ಯಾಸದ ಹಾಗೂ ಸೇವಾ ಪ್ರಮಾಣ ಪತ್ರಗಳನ್ನು ಲಗತ್ತಿಸಬೇಕಾಗಿರುತ್ತದೆ. ಎಲ್ಲಾ ಮಾಹಿತಿಗಳನ್ನೊಳಗೊಂಡ ಅರ್ಜಿಗಳನ್ನು ಮೇಲಾಧಿಕಾರಿಗಳ ಮುಖಾಂತರ ಸದಸ್ಯ ಕಾರ್ಯದರ್ಶಿಗಳು ಹಾಗೂ ಪ್ರಾಂಶುಪಾಲರು, ಶುಶ್ರೂಷಾ ಮಹಾವಿದ್ಯಾಲಯ, ಕೋಟೆ, ಬೆಂಗಳೂರು ಇವರಿಗೆ ಖುದ್ದಾಗಿ ಅಥವಾ ಅಂಚೆ ಮೂಲಕವಾಗಲೀ ದಿನಾಂಕ: 10.7.2007 ರ ಸಂಜೆ 4.00 ಗಂಟೆಯೊಳಗಾಗಿ ತಲುಪಿಸತಕ್ಕದ್ದು.

ನಿಗದಿತ ವಾಯಿದೆಯನ್ನು ಮೀರಿ ಬರುವ ಅರ್ಜಿಗಳನ್ನು ಯಾವ ಕಾರಣವನ್ನು ನೀಡದೇ ಒಟ್ಟಾರೆ ತಿರಸ್ಕರಿಸಲಾಗುವುದು.

ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಸದರಿ ವ್ಯಾಸಂಗಕ್ಕೆ ಅರ್ಹರಾದ ಅರ್ಜಿದಾರರನ್ನು ಮೌಖಿಕ ಪರೀಕ್ಷೆಗೆ ಹಾಜರಾಗುವಂತೆ ತಿಳಿಸಲಾಗುವುದು. ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಆಯ್ಕೆ ಸಮಿತಿಯ ಮುಂದೆ ಎಲ್ಲಾ ಮುಖ್ಯ ದಾಖಲಾತಿಗಳೊಂದಿಗೆ ಹಾಜರಾಗತಕ್ಕದ್ದು.

ಸದರಿ ವ್ಯಾಸಂಗಕ್ಕೆ 46 ಸ್ಥಾನಗಳು ಲಭ್ಯವಿದ್ದು ಅವುಗಳಲ್ಲಿ -

| | | |
|---|---|---|
| ಅ) | ವಿಶ್ವ ಆರೋಗ್ಯ ಸಂಸ್ಥೆ, ನವದೆಹಲಿ ಇವರು ನಿಯೋಜಿಸಿರುವ ವಿದೇಶಿ ಅರ್ಜಿದಾರರಿಗೆ | 5 ಸ್ಥಾನ |
| ಆ) | ಕರ್ನಾಟಕ ರಾಜ್ಯ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಾಮಾನ್ಯ ಶುಶ್ರೂಷಾ ತರಬೇತಿಯನ್ನು ಹೊಂದಿರುವ ಮಹಿಳಾ ಆರೋಗ್ಯ ಸಂದರ್ಶಿಕಿಯರಿಗೆ | 4 ಸ್ಥಾನ |
| ಇ) | ಉಳಿದ ಸ್ಥಾನಗಳನ್ನು ಕರ್ನಾಟಕ ರಾಜ್ಯ ಸರ್ಕಾರದ ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಹಾಗೂ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶುಶ್ರೂಷಕರಿಗೆ | 31 ಸ್ಥಾನ |
| ಈ) | ಡಾ: ಎಂ.ವಿ. ಶೆಟ್ಟಿ ಮೆಮೋರಿಯಲ್ ಟ್ರಸ್ಟ್, ಮಂಗಳೂರು ಈ ಸಂಸ್ಥೆಗೆ ಸರ್ಕಾರದ ವತಿಯಿಂದ ಆಯ್ಕೆ ಮಾಡುವ ಸ್ಥಾನಗಳು | 6 ಸ್ಥಾನ |

ಮೇಲ್ಕಂಡ ಅ ಮತ್ತು ಆ ಸ್ಥಾನಗಳಿಗೆ ಅಭ್ಯರ್ಥಿಗಳಿಗೆ ಇಲ್ಲವಾಗಿ ಸ್ಥಾನಗಳು ಖಾಲಿ ಬಿದ್ದಲ್ಲಿ ಮೇಲ್ಕಂಡ (ಇ) ಅರ್ಜಿದಾರರಿಗೆ ಭರ್ತಿ ಮಾಡಲಾಗುವುದು.

ಪಿ.ಆರ್. 834 ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪರವಾಗಿ

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಂತಿಮ ಅಧಿಸೂಚನೆ ನಂ.ಕೆ.ಎಸ್.ಎ. : ಸಿ.ಆರ್: 6/04-05, ದಿನಾಂಕ: 6ನೇ ಜೂನ್ 2007

ನಂ.ಕೆ.ಎಸ್.ಎ:ಸಿ.ಆರ್ :6/04-05, ದಿನಾಂಕ: 19.8.2004ರ ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ಬೆಂಗಳೂರು ನಗರ ತಣ್ಣೀರನಹಳ್ಳಿ ನಗರ ಭಾಗ-2 ರ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಈ ಬಗ್ಗೆ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯವರು ವರದಿ ಸಲ್ಲಿಸಿ ಈ ಪ್ರದೇಶದಲ್ಲಿ ಗುಡಿಸಲು ಇರುವುದರಿಂದ ಹಾಗೂ ಈ ಪ್ರದೇಶವು ಕೊಳಚೆ ಗುಣಲಕ್ಷಣಗಳನ್ನು ಹೊಂದಿರುವುದರಿಂದ ಇದನ್ನು ಕೊಳಚೆ ಪ್ರದೇಶವೆಂದು ಅಂತಿಮವಾಗಿ ಘೋಷಿಸುವಂತೆ ತಿಳಿಸಿರುತ್ತಾರೆ. ಸದರಿ ಪ್ರಿಲಿಮಿನರಿ ಅಧಿಸೂಚನೆಗೆ ಸಂಬಂಧಿಸಿದಂತೆ ಡೆಪ್ಯುಟಿ ಮ್ಯಾನೇಜರ್, ಮುಫತ್‌ಲಾಲ್ ಪ್ಲೈವುಡ್ ಇಂಡಸ್ಟ್ರೀಸ್ ಲಿ., ರವರು ದಿನಾಂಕ: 19.8.2004ರ ಪ್ರಾರಂಭಿಕ ಅಧಿಸೂಚನೆಗೆ ಆಕ್ಷೇಪಣೆಗಳನ್ನು ಸಲ್ಲಿಸಿ, ಪ್ರಶ್ನಿತ ಜಮೀನು ಮುಫತ್‌ಲಾಲ್ ಇಂಡಸ್ಟ್ರೀಸ್‌ಗೆ ಸೇರಿರುವ ಸ್ವತ್ತಾಗಿದ್ದು, ಸದರಿ ಪ್ರದೇಶವನ್ನು ಘೋಷಣೆಯಿಂದ ಕೈಬಿಡಬೇಕೆಂದು ಕೋರಿರುತ್ತಾರೆ. ಈ ಬಗ್ಗೆ ಜಿಲ್ಲಾಧಿಕಾರಿಗಳ ನ್ಯಾಯಾಲಯದಲ್ಲಿ ಪ್ರಕರಣವನ್ನು ತೆಗೆದುಕೊಂಡು ದಿನಾಂಕ:15.5.2007ರ ಆದೇಶದಲ್ಲಿ ಸದರಿಯವರ ಆಕ್ಷೇಪಣೆಯನ್ನು ತಿರಸ್ಕರಿಸಿ ಕೊಳಚೆ ಪ್ರದೇಶವೆಂದು ಘೋಷಿಸಲು ಆದೇಶಿಸಿರುತ್ತಾರೆ.

ಪ್ರಶ್ನಿತ ಕೊಳಚೆ ಪ್ರದೇಶದಲ್ಲಿ ಗುಡಿಸಲು/ಮನೆಗಳು ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಅನಾರೋಗ್ಯದ ವಾತಾವರಣ ಉಂಟಾಗಿರುತ್ತದೆ. ಸದರಿ ಪ್ರದೇಶವನ್ನು ಅಭಿವೃದ್ಧಿಪಡಿಸುವುದು ಅತ್ಯಗತ್ಯವಾಗಿರುತ್ತದೆ. ಆದ್ದರಿಂದ ಡೆಪ್ಯುಟಿ ಮ್ಯಾನೇಜರ್, ಮುಫತ್‌ಲಾಲ್ ಪ್ಲೈವುಡ್ ಇಂಡಸ್ಟ್ರೀಸ್ ಲಿ., ರವರ ಆಕ್ಷೇಪಣೆಯನ್ನು ತಿರಸ್ಕರಿಸಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತೇನೆ.

### ಷೆಡ್ಯೂಲ್

ಬೆಂಗಳೂರು ಕಾರ್ಪೋರೇಷನ್ ವ್ಯಾಪ್ತಿಯ ಯಶವಂತಪುರ ಹೋಬಳಿ, ತಣ್ಣೀರನಹಳ್ಳಿ, ಮುನೇಶ್ವರನಗರ ಭಾಗ-2 ರ ಕೊಳಚೆ ಪ್ರದೇಶದ ಚಕ್ಕುಬಂದಿ ಹಾಗೂ ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ (ಚ.ಅ.) | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1. | ತಣ್ಣೀರನಹಳ್ಳಿ ನಗರ ಭಾಗ-2ರ ಕೊಳಚೆ ಪ್ರದೇಶ, ಬೆಂಗಳೂರು | 1) ಮುಫತ್‌ಲಾಲ್ ಪ್ಲೈವುಡ್ ಇಂಡಸ್ಟ್ರೀಸ್ ಲಿ., ಬೆಂಗಳೂರು 2) ಟಿ.ಎನ್. ಪಂಚನಾಥನ್ ಪೈಪ್ ಲೈನ್ | 81/2 76/3 | 0.21 0.02 ಒಟ್ಟು 0.23 ಗುಂಟೆ | ರಸ್ತೆ | 7/6ರ ಕೈಗಾರಿಕಾ ಷೆಡ್ | ಘೋಷಿತ ಕೊಳಚೆ ಪ್ರದೇಶ 81/1,2,7/2 | ಸ.ನಂ. 81/2ರ ಉಳಿಕೆ ಮತ್ತು 76/3ರ ಉಳಿಕೆ |

ಎಂ.ಎ. ಸಾಧಿಕ್

ಪಿ.ಆರ್. 836 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ನಂ. ಎಲ್.ಎನ್.ಡಿ (ಎನ್) ಸಿ.ಆರ್. 174/95-96, ದಿನಾಂಕ: 16ನೇ ಜೂನ್ 2007**

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಹೇರೋಹಳ್ಳಿ ಗ್ರಾಮದ ಸ.ನಂ. 67 ರಲ್ಲಿ 1.20 ಎಕರೆ:ಗುಂಟೆ ಜಮೀನನ್ನು ಅಧ್ಯಯನ ವಿದ್ಯಾ ಟ್ರಸ್ಟ್‌ಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ.237 ಎಲ್.ಜಿ.ಬಿ. 94, ದಿನಾಂಕ: 8.8.2000.
2. ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ.130 ಎಲ್.ಜಿ.ಬಿ. 2007, ದಿನಾಂಕ: 19.5.2007.
3. ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ:ಎಲ್.ಎನ್.ಡಿ:ಸಿ.ಆರ್.81/94-95, ದಿನಾಂಕ:3.11.1994.
4. ಅಧ್ಯಯನ ವಿದ್ಯಾಟ್ರಸ್ಟ್ (ರಿ) ರವರ ಮನವಿ ದಿನಾಂಕ:8.6.2007.

ಅಧ್ಯಯನ ವಿದ್ಯಾಟ್ರಸ್ಟ್ (ರಿ) ಬೆಂಗಳೂರು ರವರಿಗೆ, ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಹೇರೋಹಳ್ಳಿ ಗ್ರಾಮದ ಸ.ನಂ. 67 ರಲ್ಲಿ 1.20 ಎಕರೆ:ಗುಂಟೆ ಜಮೀನನ್ನು ಎಕರೆ ಒಂದಕ್ಕೆ 5.00 ಲಕ್ಷದಂತೆ ಮಾರುಕಟ್ಟೆ ಬೆಲೆ ಮತ್ತು ನಿಯಮಾನುಸಾರ ಇತರೆ ಶುಲ್ಕವನ್ನು ವಿಧಿಸಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ವಸತಿ ಶಾಲೆ ಸ್ಥಾಪಿಸಲು ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಮಂಜೂರು ಮಾಡಲಾಗಿರುತ್ತದೆ. ಮಂಜೂರಾದಂತೆ ಎಕರೆ ಒಂದಕ್ಕೆ 5.00 ಲಕ್ಷ ಕಿಮ್ಮತ್ತು ವಿಧಿಸಿ 1.20 ಎಕರೆ:ಗುಂಟೆಗೆ 7,50,00-00 ಹಾಗೂ ಭೂ ಪರಿವರ್ತನಾ ಶುಲ್ಕ 81,675-00 ರೂ. ಮತ್ತು ಪೋಡಿ ಶುಲ್ಕ ರೂ. 35-00 ಸೇರಿ ಒಟ್ಟು 8,31,710-00 ರೂ. ಗಳನ್ನು ಸರ್ಕಾರಕ್ಕೆ ಪಾವತಿಸಲು ಸಂಸ್ಥೆಯವರಿಗೆ ದಿನಾಂಕ: 14.9.2000 ರಂದು ತಿಳುವಳಿಕೆ ಪತ್ರ ನೀಡಲಾಗಿರುತ್ತದೆ.

ಅರ್ಜಿತ ಸಂಸ್ಥೆಯವರು ಸರ್ಕಾರಕ್ಕೆ ಕಟ್ಟಬೇಕಾದ ಮೊತ್ತದ ಶೇ. 50 ರಷ್ಟು ರಿಯಾಯಿತಿ ಕೋರಿ ಸರ್ಕಾರದ ಮಟ್ಟದಲ್ಲಿ ಪತ್ರ ವ್ಯವಹಾರ ನಡೆಸಿದ್ದು, ಹಣವನ್ನು ಪಾವತಿಸಿರುವುದಿಲ್ಲ. ನಂತರ ದಿನಾಂಕ:20.7.2006 ರಂದು ಈ ಕಛೇರಿಗೆ ಮನವಿ ಸಲ್ಲಿಸಿ ದಿನಾಂಕ:14.9.2006 ರಲ್ಲಿನ ತಿಳುವಳಿಕೆ ಪತ್ರದಂತೆ 8,31,710-00 ರೂ. ಗಳನ್ನು ಪಾವತಿಸಲು ಅನುವು ಮಾಡಿಕೊಡಬೇಕೆಂದು ಕೋರಿರುತ್ತಾರೆ. ಈ ಬಗ್ಗೆ ಸರ್ಕಾರಕ್ಕೆ ಈ ಕಛೇರಿಯಿಂದ ಸ್ಪಷ್ಟೀಕರಣ ಕೋರಲಾಗಿದ್ದು, ಉಲ್ಲೇಖ (2)ರ ಸರ್ಕಾರದ ಆದೇಶದಲ್ಲಿ ದಿನಾಂಕ: 14.9.2000 ತಿಳುವಳಿಕೆ ಪತ್ರದಂತೆ ಹಣವನ್ನು ಜಮಾ ಮಾಡಿಕೊಳ್ಳಲು ತಿಳಿಸಿರುತ್ತಾರೆ. ಆದರಂತೆ ಅರ್ಜಿತ ಸಂಸ್ಥೆಯವರು ಸರ್ಕಾರಕ್ಕೆ ಹಣಪಾವತಿಸಲು ದಿನಾಂಕ: 28.5.2007ರಂದು ಸಂಸ್ಥೆಯವರಿಗೆ ತಿಳುವಳಿಕೆ ಪತ್ರ ನೀಡಿ 8,31,730-00 ರೂ. ಗಳನ್ನು ಪಾವತಿಸಿ ಚಲನ್ ಹಾಜರುಪಡಿಸಲು ಸೂಚಿಸಲಾಗಿರುತ್ತದೆ. ಅದರಂತೆ ಅರ್ಜಿದಾರರು ದಿನಾಂಕ: 7.6.2007 ರಂದು ಸರ್ಕಾರಕ್ಕೆ ಹಣ ಪಾವತಿಸಿ ಚಲನ್ ನಂ.35 ಅನ್ನು ಹಾಜರುಪಡಿಸಿರುತ್ತಾರೆ ಮತ್ತು ಭೂ ಮಂಜೂರಾತಿ ಆದೇಶವನ್ನು ನೀಡಬೇಕೆಂದು ಕೋರಿರುತ್ತಾರೆ.

ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಹೇರೋಹಳ್ಳಿ ಗ್ರಾಮದ ಸ.ನಂ.67ರಲ್ಲಿ 1.20 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4)ರ ಅನ್ವಯ ಗೋಮಾಳ ಶೀರ್ಷಿಕೆಯನ್ನು ತಗ್ಗಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ಕಲಂ 20(1) ರನ್ವಯ ಅಧ್ಯಯನ ವಿದ್ಯಾ ಟ್ರಸ್ಟ್‌ಗೆ ಸರ್ಕಾರದ ಪೂರ್ವಾನುಮೋದನೆಯಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಮಂಜೂರು ಮಾಡಲಾಗಿದೆ.

### ಷರತ್ತುಗಳು

1) ಭೂಮಿಗೆ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾದ ಏನನ್ನೂ ಮಾಡತಕ್ಕದ್ದಲ್ಲ.
2) ಮಂಜೂರಿದಾರರು ಭೂಮಿಯನ್ನು ಗುತ್ತಿಗೆಗ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಜಮೀನನ್ನು ಬ್ಯಾಂಕ್/ ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಲು ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತಿರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.
3) ಭೂಮಿಯನ್ನು ಸಂಘದ ಕಾರ್ಯದರ್ಶಿಗಳು/ಪದಾಧಿಕಾರಿಗಳು/ಸದಸ್ಯರು ಮಂಜೂರಿ ಮಾಡಿರುವ ಉದ್ದೇಶಕ್ಕೆ ಮಾತ್ರ ಉಪಯೋಗಿಸತಕ್ಕದ್ದು.
4) ಭೂಮಿಯನ್ನು ಯಾವ ಉದ್ದೇಶಕ್ಕಾಗಿ ಮಂಜೂರಾತಿ ಕೊಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದಲ್ಲ.
5) ಅರ್ಜಿತ ಸಂಸ್ಥೆಯವರು ಈ ಮಂಜೂರಾತಿಯ ಬಗ್ಗೆ ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ಮಂಜೂರಾತಿ ಪತ್ರವನ್ನು ನೋಂದಣಿ ಮಾಡಿಸಿಕೊಳ್ಳತಕ್ಕದ್ದು.
6) ಸಂಸ್ಥೆಯ ನೋಂದಣಿಯು ರದ್ದಾದಾಗ ಮಂಜೂರಾತಿಯನ್ನು ಕೊನೆಗೊಳಿಸಲಾಗುವುದು.
7) ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದರೆ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು.
8) ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.
9) ಮಂಜೂರಿದಾರರು ಜಮೀನನ್ನು ಸ್ವಾಧೀನಕ್ಕೆ ಪಡೆದ ಒಂದು ವರ್ಷದೊಳಗೆ 15 ಮರಗಳನ್ನು ಬಳಸತಕ್ಕದ್ದು.
10) ಮಂಜೂರಾತಿದಾರರು ಮಂಜೂರಾತಿ ಪಡೆದ ಜಮೀನನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ವಸತಿ ಶಾಲೆ ಸ್ಥಾಪಿಸಲು ಮಂಜೂರಾದ ದಿನಾಂಕದಿಂದ 2 ವರ್ಷದ ಅವಧಿಯೊಳಗೆ ಕೇಂದ್ರಸರ್ಕಾರದಿಂದ ಅನುಮತಿ ಪಡೆಯತಕ್ಕದ್ದು.
11) ಶಾಸಬದ್ಧ ಕಾಯ್ದೆಗಳ ಕಟ್ಟು ಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 837

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ ಪತ್ರ

**ಸಂ:ಎಲ್.ಆರ್.ಎಫ್(ಎನ್.ಎ):ಸಿಆರ್:4/06-07, ದಿನಾಂಕ: 30ನೇ ಮೇ 2007**

**ವಿಷಯ:** ಮ್ಯಾನೇಜಿಂಗ್ ಡೈರೆಕ್ಟರ್, ಶ್ರೀ ಆನಂದ ತೀರ್ಥ ಆರೋಮ್ಯಾಟಿಕ್ಸ್ ಪ್ರೈ.ಲಿ., ಶ್ರೀ ವಿಜಯರಾಜ ಎಸ್ಟೇಟ್ ಚೊಕ್ಕನಹಳ್ಳಿ, ಜಕ್ಕೂರು ಅಂಚೆ, ಬೆಂಗಳೂರು 560 064 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಚೊಕ್ಕನಹಳ್ಳಿ ಗ್ರಾಮದ ಸ.ನಂ. 56 ರಲ್ಲಿ 6-39 ಮತ್ತು ಸ.ನಂ. 57 ರಲ್ಲಿ 3-21 ಎಕರೆ:ಗುಂಟೆ ಜಮೀನುಗಳನ್ನು ಆರೋಮ್ಯಾಟಿಕ್ ಪ್ಲಾಂಟೇಷನ್ ಕಲ್ಟಿವೇಷನ್ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಮ್ಯಾನೇಜಿಂಗ್ ಡೈರೆಕ್ಟರ್, ಶ್ರೀ ಆನಂದ ತೀರ್ಥ ಆರೋಮ್ಯಾಟಿಕ್ಸ್ ಪ್ರೈ ಲಿ., ಶ್ರೀ ವಿಜಯರಾಜ ಎಸ್ಟೇಟ್ ಚೊಕ್ಕನಹಳ್ಳಿ, ಜಕ್ಕೂರು ಅಂಚೆ, ಬೆಂಗಳೂರು 560 064 ರವರು, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಚೊಕ್ಕನಹಳ್ಳಿ ಗ್ರಾಮದ ಸ.ನಂ. 56 ರಲ್ಲಿ 6-39 ಮತ್ತು ಸ.ನಂ.57ರಲ್ಲಿ 3-21 ಎಕರೆ:ಗುಂಟೆ ಒಟ್ಟು 10-20 ಎಕರೆ:ಗುಂಟೆ ಜಮೀನನ್ನು ಆರೋಮ್ಯಾಟಿಕ್ ಪ್ಲಾಂಟೇಷನ್ ಕಲ್ಟಿವೇಷನ್ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ: ಎಲ್.ಆರ್.ಎಫ್..ಎನ್.ಎ.ಸಿ.ಆರ್: 197/05-06, ದಿನಾಂಕ: 26-03-2007 ರಲ್ಲಿ ಪ್ರಸ್ತಾಪಿತ ಚೊಕ್ಕನಹಳ್ಳಿ ಗ್ರಾಮದ ಸ.ನಂ. 56 ರಲ್ಲಿ 6-39 ಮತ್ತು ಸ.ನಂ. 57 ರಲ್ಲಿ 3-21 ಎಕರೆ:ಗುಂಟೆ ಒಟ್ಟು 10-20 ಎಕರೆ:ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961, ಕಲಂ 109 (1)(V) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ರಿಜಿಸ್ಟ್ರೇಷನ್ ಆಫ್ ಕಂಪನೀಸ್, ಕರ್ನಾಟಕ, ಬೆಂಗಳೂರು ರವರ ನೋಂದಣಿ ಸಂಖ್ಯೆಯು 24249 ಕೆ.ಎ.2005 ಪಿಟಿಸಿ 036402, ದಿನಾಂಕ: 26-05-2005 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರ ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109ರ ಪ್ರಕಾರ ಆರೋಮ್ಯಾಟಿಕ್ ಪ್ಲಾಂಟೇಷನ್ ಕಲ್ಟಿವೇಷನ್ ಉದ್ದೇಶಕ್ಕೆ 4 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಚೊಕ್ಕನಹಳ್ಳಿ ಗ್ರಾಮದ ಸ.ಂ. 56 ರಲ್ಲಿ 6-39 ಮತ್ತು ಸ.ನಂ. 57 ರಲ್ಲಿ 3-21 ಎಕರೆ:ಗುಂಟೆ ಒಟ್ಟು 10-20 ಎಕರೆ:ಗುಂಟೆ ಜಮೀನನ್ನು ಮ್ಯಾನೇಜಿಂಗ್ ಡೈರೆಕ್ಟರ್ ಶ್ರೀ ಆನಂದ ತೀರ್ಥ ಆರೋಮ್ಯಾಟಿಕ್ಸ್ ಪ್ರೈ. ಲಿ., ಶ್ರೀ ವಿಜಯರಾಜ ಎಸ್ಟೇಟ್, ಚೊಕ್ಕನಹಳ್ಳಿ ಜಕ್ಕೂರು ಅಂಚೆ, ಬೆಂಗಳೂರು 560 064 ರವರಿಗೆ ಆರೋಮ್ಯಾಟಿಕ್ ಪ್ಲಾಂಟೇಷನ್ ಕಲ್ಟಿವೇಷನ್ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1) (v) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು, ದಿನಾಂಕ: 23-04-2003 ರಂತೆ ಆರೋಮ್ಯಾಟಿಕ್ ಪ್ಲಾಂಟೇಷನ್ ಕಲ್ಟಿವೇಷನ್ ಉದ್ದೇಶಕ್ಕೆ 2 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

### ಷರತ್ತುಗಳು

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅನುದಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗಧಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಆರೋಮ್ಯಾಟಿಕ್ ಪ್ಲಾಂಟೇಷನ್ ಕಲ್ಟಿವೇಷನ್ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ., ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿಸಿ, ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು, (ಕಂ)

ಪಿ.ಆರ್. 838 ಬೆಂಗಳೂರು ಜಿಲ್ಲೆ, ಬೆಂಗಳೂರು.

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ**

**ಅಧಿಸೂಚನೆ ಸಂಖ್ಯೆ:ಅಪಜೀ 17 ಸಿಆರ್‌ಎಸ್ 2007 ಬೆಂಗಳೂರು, ದಿನಾಂಕ:5ನೇ ಜೂನ್ 2007**

ಸರ್ಕಾರಿ ಅಧಿಸೂಚನೆ ಸಂ:ಅಪಜೀ 37 ಎಫ್‌ಡಿಸಿ 2005, ದಿನಾಂಕ:20.9.2005 ರಲ್ಲಿ 2005ರ ಮಾಹಿತಿ ಹಕ್ಕು ಕಾಯ್ದೆ (2005ರ ಕೇಂದ್ರ ಕಾಯ್ದೆ ಸಂ:22) ಸೆಕ್ಷನ್ 5(1) ಮತ್ತು 5 (2) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಧಾನ ಕಾರ್ಯದರ್ಶಿಗಳು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಕಛೇರಿಗೆ ಸಂಬಂಧಿಸಿದಂತೆ ಅರಣ್ಯ ವಿಷಯಗಳ ನಿರ್ವಹಣೆಗೆ ಸಂಬಂಧಿಸಿದಂತೆ ಅಧೀನ ಕಾರ್ಯದರ್ಶಿ–3, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ ನೇಮಿಸಿರುವುದನ್ನು ಮಾರ್ಪಡಿಸಿ ಈ ಕೆಳಕಂಡ ಶಾಖೆಗಳ ಎದುರಿಗೆ ತೋರಿಸಲ್ಪಟ್ಟ ಅಧೀನ ಕಾರ್ಯದರ್ಶಿ ಮತ್ತು ಶಾಖಾಧಿಕಾರಿಗಳನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಎಂದು ಪುನರ್ ನೇಮಕ ಮಾಡಲಾಗಿದೆ.

| ಕ್ರ. ಸಂ. | ಶಾಖೆ | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ |
|---|---|---|---|
| 1 | ಸೇವೆಗಳು–1 | ಅಧೀನ ಕಾರ್ಯದರ್ಶಿ (ಸೇವೆಗಳು–1) | ಶಾಖಾಧಿಕಾರಿ (ಸೇವೆಗಳು–1) |
| 2 | ಸೇವೆಗಳು–2 | ಅಧೀನ ಕಾರ್ಯದರ್ಶಿ (ಸೇವೆಗಳು–2) | ಶಾಖಾಧಿಕಾರಿ (ಸೇವೆಗಳು–2) |
| 2 | ಯೋಜನೆ ವಿಷಯಗಳು | ಅಧೀನ ಕಾರ್ಯದರ್ಶಿ (ವನ್ಯ ಜೀವಿ ಮತ್ತು ನಿಗಮ) | ಶಾಖಾಧಿಕಾರಿ (ಸೇವೆಗಳು–2) |
| 3 | ವನ್ಯ ಜೀವಿ ಮತ್ತು ನಿಗಮ | ಅಧೀನ ಕಾರ್ಯದರ್ಶಿ (ವನ್ಯ ಜೀವಿ ಮತ್ತು ನಿಗಮ) | ಶಾಖಾಧಿಕಾರಿ (ವನ್ಯ ಜೀವಿ ಮತ್ತು ನಿಗಮ) |
| 4 | ಅರಣ್ಯ | ಅಧೀನ ಕಾರ್ಯದರ್ಶಿ (ಅರಣ್ಯ) | ಶಾಖಾಧಿಕಾರಿ (ಅರಣ್ಯ) |
| 5 | ಅರಣ್ಯ ಸಂರಕ್ಷಣೆ | ಅಧಿನ ಕಾರ್ಯದರ್ಶಿ (ಸಂರಕ್ಷಣೆ ಮತ್ತು ಸಮನ್ವಯ) | ಶಾಖಾಧಿಕಾರಿ (ಸಂರಕ್ಷಣೆ) |
| 6 | ಸಮನ್ವಯ | ಅಧೀನ ಕಾರ್ಯದರ್ಶಿ (ಸಂರಕ್ಷಣೆ ಮತ್ತು ಸಮನ್ವಯ) | ಶಾಖಾಧಿಕಾರಿ (ಸಮನ್ವಯ ಮತ್ತು ಸ್ಕೀಮರ) |

ಈ ಆದೇಶವನ್ನು ಹೊರಡಿಸಿರುವ ದಿನಾಂಕದಿಂದ ಜಾರಿಯಲ್ಲಿ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 771

**ಪಿ.ಆರ್. ಕಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ,**

**ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ**

**ಸಂಖ್ಯೆ:ಡಬ್ಲ್ಯೂಸಿಎ:ಸಿಆರ್:60:2007 ದಿನಾಂಕ:6ನೇ ಜೂನ್ 2007**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಅರ್ಜಿದಾರರು:

1. ರೋಹಿಣಿ ಕೋಂ ದಿ ಈರಪ್ಪ ಗೌಡ
2. ಮನು ಬಿನ್ ಈರಪ್ಪ ಗೌಡ
3. ಮೇಘನಾ ಬಿನ್ ದಿ:ಈರಪ್ಪ ಗೌಡ
   ವೆಂಕಟೇಶ್ ನಗರ

ಪ್ರತಿವಾದಿಗಳು:

1. ದೇವರಾಜ ಬಿನ್ ಕುಪ್ಪಸ್ವಾಮಿ, ಗುತ್ತಿಗೆದಾರರು ವಾಸ:ವಿನೋಭನಗರ ಚಾನಲ್ ಹತ್ತಿರ ಶಿವಮೊಗ್ಗ,
2. ಅಣ್ಣಪ್ಪ ಕೆ.ಎಂ. ಬಿನ್ ಕೆ.ಜಿ. ಮಲ್ಲಪ್ಪ, ಆರ್‌ಸಿಸಿ ಕಟ್ಟಡದ ಮಾಲೀಕರು ತಿರುಪಾಳಚ್ಚು ರಸ್ತೆ ಲಷ್ಕರ ಮೊಹಲ್ಲಾ ಸರ್ಕಲ್ ಹತ್ತಿರ ಶಿವಮೊಗ್ಗ

**ಅಧಿಸೂಚನೆ**

ಅರ್ಜಿದಾರರಾದ ಶ್ರೀ/ಶ್ರೀಮತಿ ರೋಹಿಣಿ ಮತ್ತು ಇತರರು ಇವರು ಪ್ರತಿವಾದ ತಮ್ಮ ಪತಿಯಾದ ದಿ:ಈರಪ್ಪಗೌಡ ಇವರು ಪ್ರತಿವಾದಿಗಳಾದ 1 ದೇವರಾಜ್ ಬಿನ್ ಕುಪ್ಪಸ್ವಾಮಿ ಗುತ್ತಿಗೆ ದಾರರು ಮತ್ತು 2. ಅಣ್ಣಪ್ಪ ಕೆ.ಎಂ. ಮಲ್ಲಪ್ಪ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:31.12.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವಯ ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್ ಕುಮಾರ್**

ಪಿ.ಆರ್. 774

ಕಾರ್ಮಿಕ ಅಧಿಕಾರಿ ಮತ್ತು

ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಶಿವಮೊಗ್ಗ.

**ಕರ್ನಾಟಕ ಲೋಕ ಸೇವಾ ಆಯೋಗ "ಉದ್ಯೋಗ ಸೌಧ", ಬೆಂಗಳೂರು–01**

**ಅಧಿಸೂಚನೆ**

**ಇ(1) 69/2007–08/ಪಿಎಸ್‌ಸಿ ದಿನಾಂಕ:14ನೇ ಜೂನ್ 2007**

**ವಿಷಯ:** 2006ನೇ ಸಾಲಿನ ಗೆಜೆಟೆಡ್ ಪ್ರೊಬೆಷನರ್ಸ್ ಪೂರ್ವಭಾವಿ ಪರೀಕ್ಷೆಯಲ್ಲಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ ಶ್ರೀ ಶ್ರೀನಿವಾಸ್ ಟಿ.ಡಿ. (ನೋಂ.ಸಂ.125211) ಅಭ್ಯರ್ಥಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** 1) ಶ್ರೀ ಶ್ರೀನಿವಾಸ್ ಟಿ.ಡಿ. ಇವರು 2006ನೇ ಸಾಲಿನ ಗೆಜೆಟೆಡ್ ಪ್ರೊಬೆಷನರ್ಸ್ ಹುದ್ದೆಗೆ ಸಲ್ಲಿಸಿ ಅರ್ಜಿ.

2) ಶ್ರೀ ಶ್ರೀನಿವಾಸ್ ಟಿ.ಡಿ. ಇವರಿಗೆ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸಿನ ಸಂಖ್ಯೆ: ಇ(1) 375/2006–07/ಪಿಎಸ್‌ಸಿ ದಿನಾಂಕ:25/01/2007.

3) ಶ್ರೀ ಶ್ರೀನಿವಾಸ್ ಟಿ.ಡಿ. ಇವರು ದಿನಾಂಕ:8/2/2007 ರಂದು ಸಲ್ಲಿಸಿದ ಸಮಾಜಾಯಿಷಿ ಪತ್ರ.

4) ವಿಚಾರಣಾಧಿಕಾರಿಗಳ ನಡವಳಿ ದಿನಾಂಕ:22/03/2007

5) ವಿಚಾರಣಾ ವರದಿ ದಿನಾಂಕ:16/5/2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರನ್ವಯ ಶ್ರೀ ಶ್ರೀನಿವಾಸ್ ಟಿ.ಡಿ. ಇವರು 2006ನೇ ಸಾಲಿನ ಗೆಜೆಟೆಡ್ ಪ್ರೊಬೆಷನರ್ಸ್ ಪೂರ್ವಭಾವಿ ಪರೀಕ್ಷೆಗೆ ಸಲ್ಲಿಸಿದ ಅರ್ಜಿಯ ಮೇರೆಗೆ ಇವರಿಗೆ ಸದರಿ ಪರೀಕ್ಷೆ ತೆಗೆದುಕೊಳ್ಳಲು ನೋಂದಣಿ ಸಂಖ್ಯೆ:125211 ಪ್ರವೇಶ ಪತ್ರವನ್ನು ಜಾರಿ ಮಾಡಲಾಗಿತ್ತು. ಅದರಂತೆ ಇವರು ದಿನಾಂಕ:10.9.2006 ರಂದು ನಡೆದ ಪೂರ್ವಭಾವಿ ಪರೀಕ್ಷೆಯ ಸಾರ್ವಜನಿಕ ಆಡಳಿತ ಪರೀಕ್ಷೆಗೆ ಹಾಜರಾಗಿ ಪರೀಕ್ಷಾ ವೇಳೆಯಲ್ಲಿ ಎರಡು ಚೀಟಿಗಳನ್ನು ಇಟ್ಟುಕೊಂಡು ನಕಲು ಮಾಡಿ, ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ್ದರಿಂದ, ಮೇಲೆ ಓದಲಾದ (2) ರನ್ವಯ ಸದರಿ ಅಭ್ಯರ್ಥಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಈ ನೋಟೀಸಿಗೆ ಸದರಿ ಅಭ್ಯರ್ಥಿಯು ಮೇಲೆ ಓದಲಾದ (3)ರಲ್ಲಿನ ಹೇಳಿಕೆಯಲ್ಲಿ ಆರೋಪವನ್ನು ಸ್ಪಷ್ಟವಾಗಿ ತಳ್ಳಿಹಾಕಿರುವುದಿಲ್ಲ. ಇಲ್ಲವೇ ಒಪ್ಪಿಕೊಂಡಿರುವುದಿಲ್ಲವಾದ್ದರಿಂದ ಇವರ ವಿಚಾರಣೆ ನಡೆಸಿ ವರದಿ ನೀಡುವಂತೆ ಶ್ರೀ ಎಸ್. ಅನಂತಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಿತ್ತು.

ಸದರಿ ಅಭ್ಯರ್ಥಿಯು ದಿನಾಂಕ:11.4.2007 ಮತ್ತು 7.5.2007 ರಂದು ವಿಚಾರಣಾಧಿಕಾರಿಗಳ ಮುಂದೆ ಹಾಜರಾಗಿ ತಾನು ಚೀಟಿಗಳನ್ನು ಪರೀಕ್ಷಾ ಕೇಂದ್ರದಲ್ಲಿ ಇಟ್ಟುಕೊಂಡಿದ್ದು, ಈ ಎರಡೂ ಚೀಟಿಗಳನ್ನು ಉಪಯೋಗಿಸಿಕೊಂಡು ಉತ್ತರವನ್ನು ಬರೆಯುತ್ತಿದ್ದುದು ನಿಜವೆಂದು ಒಪ್ಪಿಕೊಂಡಿರುತ್ತಾರೆ.

ಅಭ್ಯರ್ಥಿಯ ಹೇಳಿಕೆ ಮತ್ತು ಲಭ್ಯವಿದ್ದ ದಾಖಲೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ವಿಚಾರಣಾಧಿಕಾರಿಗಳು ದಿನಾಂಕ 16.5.2007ರ ತಮ್ಮ ವರದಿಯಲ್ಲಿ ಅಭ್ಯರ್ಥಿಯ ಮೇಲೆ ಮಾಡಲಾದ ಆರೋಪವು ಸಾಬೀತಾಗಿದೆ ಎಂದು ತಿಳಿಸಿದ್ದು, ಆಯೋಗವು ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಕೆಳಗಿನಚಿತೆ ದಂಡನೆ ವಿಧಿಸಲು ಆದೇಶಿಸಿರುತ್ತದೆ.

**ಆದೇಶ ಸಂಖ್ಯೆ: ಇ(1) 70/2007–08/ಪಿಎಸ್‌ಸಿ ಬೆಂಗಳೂರು, ದಿನಾಂಕ:14ನೇ ಜೂನ್ 2007**

ಕರ್ನಾಟಕ ಲೋಕ ಸೇವಾ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ 398/93–94/ಪಿಎಸ್‌ಸಿ ದಿನಾಂಕ:14.7.1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಶ್ರೀನಿವಾಸ ಟಿ.ಡಿ. (ನೋಂ.ಸಂ. 125211) ಬಿನ್ ತ್ಯಾಗರಾಜ್, ನಂ. 1277, 1ನೇ ಮುಖ್ಯ ರಸ್ತೆ, ಗಾಂಧಿನಗರ ಯಲಹಂಕ, ಬೆಂಗಳೂರು–560064 ಇವರ 2006ನೇ ಸಾಲಿನ ಗೆಜೆಟೆಡ್ ಪ್ರೊಬೆಷನರ್ಸ್ ಪೂರ್ವಬಾವಿ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವುದಲ್ಲದೆ ಆಯೋಗವು ನಡೆಸುವ ಮುಂದಿನ ನಾಲ್ಕು ಪರೀಕ್ಷೆಗಳನ್ನು ತೆಗೆದುಕೊಳ್ಳದಿರುವಂತೆ ಡಿಬಾರ್ (Debar) ಮಾಡುವ ದಂಡನೆಯನ್ನು ವಿಧಿಸಲಾಗಿದೆ.

ಆಯೋಗದ ಆದೇಶದ ಮೇರೆಗೆ

ಪಿ.ಆರ್. 775

**ಡಾ: ಹೆಚ್.ವಿ. ಪಾರ್ಶ್ವನಾಥ್**

ಕಾರ್ಯದರ್ಶಿ,

ಕರ್ನಾಟಕ ಲೋಕ ಸೇವಾ ಆಯೋಗ

**ವಸತಿ ಇಲಾಖೆ**

**ಅಧಿಸೂಚನೆ**

**ಸಂಖ್ಯೆ:ವಇ 39 ಕೊಮಂಇ 2006 ಬೆಂಗಳೂರು, ದಿನಾಂಕ: 18ನೇ ಮೇ 2007**

ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಬೆಂಗಳೂರು ನಗರದಲ್ಲಿರುವ ಬೆಂಗಳೂರು ನಗರ ಉತ್ತರ ತಾ:ನ ತಿಮ್ಮರಾಯಪ್ಪ ಗಾರ್ಡನ್–ನೀಲಸಂದ್ರ ವ್ಯಾಪ್ತಿಯಲ್ಲಿ ಬರುವ ಕೊಳಚೆ ಪ್ರದೇಶವನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರುರವರು ತಮ್ಮ ಅಧಿಸೂಚನೆ ಸಂಖ್ಯೆ:ಕೆಎಸ್ಎ ಸಿಆರ್. 7/98–99 ದಿನಾಂಕ:7.4.2004 ರಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 3(1)ರಂತೆ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತಾರೆ.

ಸದರಿ ಪ್ರದೇಶವನ್ನು ಅಭಿವೃದ್ಧಿಗೊಳಿಸಿ ಅಲ್ಲಿ ವಾಸಿಸುವ ಕೊಳಚೆ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಸರ್ಕಾರವು ಉದ್ದೇಶಿಸಿದ್ದು ಹಾಗೂ ಸದರಿ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 17 ರಂತೆ ಭೂ ಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವಾಗಿದೆ. ಆದ್ದರಿಂದ ಸಂಬಂಧಿಸಿದವರಿಗೆ/ಸಾರ್ವಜನಿಕರಿಗೆ ಸೂಚನೆಯನ್ನು ನೀಡಿ ಸದರಿ ಪ್ರದೇಶದ ಬಗ್ಗೆ ಆಸಕ್ತಿಯುಳ್ಳವರು, ಭೂ ಆಸಕ್ತಿಯುಳ್ಳವರು, ಭೂ ಸ್ವಾಧೀನವನ್ನು ಏಕೆ

ಮಾಡಬಾರದೆಂಬುದಕ್ಕೆ ಕಾರಣ /ಆಕ್ಷೇಪಣೆ/ಸಲಹೆ ಮತ್ತು ಮನವಿಗಳಿದ್ದಲ್ಲಿ ಈ ಅಧಿಸೂಚನೆ ಪ್ರಕಟವಾದ 15 ದಿನಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರು, ವಸತಿ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಕೊಠಡಿ ಸಂಖ್ಯೆ:213, 2ನೇ ಮಹಡಿ, ವಿಕಾಸ ಸೌಧ, ಬೆಂಗಳೂರು–1 ಇವರಿಗೆ ಸಲ್ಲಿಸಬಹುದು.

| ಕೊಳಚೆ ಪ್ರದೇಶದ ಹೆಸರು ಮತ್ತು ಇರುವ ಸ್ಥಳ | ಭೂ ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ (ಚ–ಅ) | ಚಕ್ಕುಬಂದಿ |
|---|---|---|---|---|
| ತಿಮ್ಮರಾಯಪ್ಪ ಗಾರ್ಡನ್, ನೀಲಸಂದ್ರ, ಬೆಂಗಳೂರು ಉತ್ತರ ತಾಲ್ಲೂಕು | ಇನಾಂತಿ<br>1.ಸಾದಪ್ಪ<br>2. ತಿಮ್ಮರಾಯಪ್ಪ<br>3. ತಿಮ್ಮಯ್ಯ | 56 | 19035 ಚ.ಅ.ಗಳು ಅಥವಾ 1768.35 ಚ.ಮೀ.ಗಳು | ಪೂರ್ವ:ಖಾಸಗಿ ಆಸ್ತಿಗಳು<br>ಪಶ್ಚಿಮ :ಖಾಸಗಿ ಆಸ್ತಿಗಳು<br>ಉತ್ತರ: ಬಜಾರ್ ರಸ್ತೆಯಿಂದ ಬರುವ ರಸ್ತೆ.<br>ದಕ್ಷಿಣ: ಖಾಸಗಿ ಜಮೀನುಗಳು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 777

**ಜಿ.ಆರ್. ನಾಗರಾಜ**
ಪೀಠಾಧಿಕಾರಿ–4, ವಸತಿ ಇಲಾಖೆ

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ

**ಸಂಖ್ಯೆ:ಡಬ್ಲ್ಯೂಸಿಎ:ಸಿಆರ್:63:2007 ದಿನಾಂಕ:6ನೇ ಜೂನ್ 2007**

**ಅರ್ಜಿದಾರರು**
1. ಶಿವಯ್ಯ ಬಿನ್ ಚನ್ನಬಸವಯ್ಯ
2. ವಿಜಯಮ್ಮ ಕೋಂ ಶಿವಯ್ಯ ಇವರುಗಳ ವಾಸ:6ನೇ ಕ್ರಾಸ್ ಶಾಂತಿನಗರ ಶಿವಮೊಗ್ಗ

**ವಿರುದ್ಧ**

**ಪ್ರತಿವಾದಿಗಳು**
1. ವಿ. ನಾಗರಾಜ್; ಲಾಲ್‌ಬಹದ್ದೂದ್ ಶಾಸ್ತ್ರಿ ನಗರೆ ದತ್ತಾಗಿರಿ ಸ್ಟೋರ್ಸ್ ಸವಳಂಗ ಮೈನ್ ರಸ್ತೆ ಶಿವಮೊಗ್ಗ
2. ಶ್ರೀ ರಂಗವೈನ್ಸ್ ಮಾಲೀಕರು ಪಿ.ವಿ. ನಾಗರಾಜ್ ಬಿ.ಹೆಚ್ ರಸ್ತೆ ಚರ್ಚ್ ಎದುರು ಶಿವಮೊಗ್ಗ,
3. ತೀರ್ಥಪ್ಪ ಶಾಂತಿನಗರ ಮೈನ್ ರಸ್ತೆ, ಚರ್ಚ್ ಹತ್ತಿರ ವಾರ್ಡ್2 ಶಿವಮೊಗ್ಗ,
4. ದಿ ಛೇರ್‌ಮೇನ್ ಕರ್ನಾಟಕ ವಿದ್ಯುತ್ ಮಂಡಳಿ ಕಾವೇರಿ ಭಾವನ ಬೆಂಗಳೂರು.
5. ದಿ. ಸುಪರ್ ಡೆಂಟೆಂಟ್ ಆಫ್ ಕರ್ನಾಟಕ ವಿದ್ಯುತ್ ಮಂಡಳಿ ಬಾಲರಾಜ್ ಅರಸರಸ್ತೆ ಸರ್ವಜ್ಞ ವೃತ್ತ ಶಿವಮೊಗ್ಗ
6. ದಿ ಅಸಿಸ್ಟೆಂಟ್ ಎಕ್ಸಿಕ್ಯೂಟೀವ್ ಇಂಜಿನಿಯರ್ ಕೆ.ಪಿ.ಸಿ.ಟಿ.ಎಲ್ ಶಿವಮೊಗ್ಗ

### ಅಧಿಸೂಚನೆ

ಅರ್ಜಿದಾರರಾದ ಶಿವಯ್ಯ ಮತ್ತು ವಿಜಯಮ್ಮ ಶಿವಮೊಗ್ಗ ಇವರು ತಮ್ಮ ಮಗನಾದ ಪ್ರಶಾಂತ್ ಇವರು 1 ಮತ್ತು 2 ಪ್ರತಿವಾದಿಗಳಾದ ಪಿವಿ ನಾಗರಾಜ್ ದತ್ತಾಗಿರಿ ಸ್ಟೋರ್ಸ್ ಶಿವಮೊಗ್ಗ ಪಿ.ವಿ. ನಾಗರಾಜ ಶ್ರೀ ರಂಗವೈನ್ಸ್ ಶಿವಮೊಗ್ಗ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 18.2.2007 ರಂದು ಸಂಭವಿಸಿದ ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್ ಕುಮಾರ್**
ಕಾರ್ಮಿಕ ಅಧಿಕಾರಿ ಮತ್ತು
ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಶಿವಮೊಗ್ಗ.

ಪಿ.ಆರ್. 778

## ಇಂಧನ ಇಲಾಖೆ

### ಅಧಿಸೂಚನೆ

**ಸಂಖ್ಯೆ:ಇಎನ್ 56 ಇಇಬಿ 2006, ಬೆಂಗಳೂರು, ದಿನಾಂಕ: 11ನೇ ಜೂನ್ 2007**

ಗುಲ್ಬರ್ಗಾ ಮತ್ತು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ಸಂಸ್ಥಾ ನಿವೇದನಾ ಹಾಗೂ ಸಂಘ ನಿಯಮಾವಳಿ ಪತ್ರದ ಆರ್ಟಿಕಲ್ 74(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ದರ್ಪಣ್ ಜೈನ್, ಭಾ.ಆ.ಸೇ., ಸರ್ಕಾರದ ಉಪ ಕಾರ್ಯದರ್ಶಿ (ಬಂಡವಾಳ ಮತ್ತು ಸಂಪನ್ಮೂಲ), ಆರ್ಥಿಕ ಇಲಾಖೆ ಇವರನ್ನು ಗುಲ್ಬರ್ಗಾ ಮತ್ತು

ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ಸಂಸ್ಥಾ ನಿವೇದನಾ ಹಾಗೂ ಸಂಘ ನಿಯಮಾವಳಿ ಪತ್ರದ ಆರ್ಟಿಕಲ್ 74(ಎ) ಹಾಗೂ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ಸಂಸ್ಥಾ ನಿವೇದನಾ ಹಾಗೂ ಸಂಘ ನಿಯಮಾವಳಿ ಪತ್ರದ ಆರ್ಟಿಕಲ್ 72(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಎಂ. ಇಂಕೊಂಗಲ ಜಮೀರ್ ಭಾ.ಆ.ಸೇ., ಸರ್ಕಾರದ ಉಪ ಕಾರ್ಯದರ್ಶಿ–3, ಆರ್ಥಿಕ ಇಲಾಖೆ ಇವರನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಬೆಂಗಳೂರು, ಮಂಗಳೂರು, ಹುಬ್ಬಳ್ಳಿ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ಸಂಸ್ಥಾ ನಿವೇದನಾ ಹಾಗೂ ಸಂಘ ನಿಯಮಾವಳಿ ಪತ್ರದ ಆರ್ಟಿಕಲ್ 74(ಎ) ಹಾಗೂ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ಸಂಸ್ಥಾ ನಿವೇದನಾ ಹಾಗೂ ಸಂಘ ನಿಯಮಾವಳಿ ಪತ್ರದ ಆರ್ಟಿಕಲ್ 72(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಪಾರ್ವತಿ ಕೇಶವಾಚಾರ್, ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರನ್ನು ಬೆಂಗಳೂರು, ಮಂಗಳೂರು, ಹುಬ್ಬಳ್ಳಿ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ (ಶ್ರೀ ಎಂ.ಲೋಕರಾಜ್, ಸರ್ಕಾರದ ಜಂಟಿ ಕಾರ್ಯದರ್ಶಿ ರವರ ನಿವೃತ್ತಿಯಿಂದ ತೆರವಾದ ಜಾಗಕ್ಕೆ) ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 785

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ಸಹಕಾರ ಇಲಾಖೆ**

**ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ 357 ಸಿಎನ್ಎಸ್ 2006, ಬೆಂಗಳೂರು, ದಿನಾಂಕ: 10ನೇ ಮೇ 2007**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 357 ಸಿಎನ್ಎಸ್ 2006, ದಿನಾಂಕ:15.12.2006ರಲ್ಲಿ ಗಂಗಾವತಿ ತಾಲ್ಲೂಕಿನ ಹುಲಿಹೈದರ್ ಗ್ರಾಮ ಸೇವಾ ಸಹಕಾರ ಸಂಘದ ಆಡಳಿತ ಮಂಡಳಿಗೆ ನಾಮನಿರ್ದೇಶನಗೊಂಡಿರುವ ಶ್ರೀ ಗುಂಡಪ್ಪ ಬಿನ್ ಮಾನಪ್ಪ ಸಾ: ಹುಲಿಹೈದರ್ ಇವರ ಹೆಸರನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಿದ್ದು ಅದರಂತೆ ಓದಿಕೊಳ್ಳತಕ್ಕದ್ದು.

"ಶ್ರೀ ಗರುಡಪ್ಪ ಬಿನ್ ಮಾನಪ್ಪ ನಾಯಕ ಸಾ: ಹುಲಿಹೈದರ್"

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 792

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು**

**ತಿದ್ದುಪಡಿ**

**ಸಂಖ್ಯೆ:ಡಿಪಿಎನ್:ನಿಶಾ–1:26:2006–07, ಬೆಂಗಳೂರು, ದಿನಾಂಕ: 7ನೇ ಜೂನ್ 2007**

ಈ ಕಛೇರಿಯ ದಿನಾಂಕ :13ನೇ ಏಪ್ರಿಲ್ 2007ರ ಸಮಸಂಖ್ಯೆಯ ಆದೇಶದಲ್ಲಿ ನಮೂದಿಸಿರುವ ಆದೇಶ ದಿನಾಂಕ:13ನೇ ಏಪ್ರಿಲ್ 2007ಕ್ಕೆ ಬದಲಾಗಿ, ದಿನಾಂಕ:15ನೇ ಮೇ 2007 ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು. ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**ಸದಾಶಿವಮೂರ್ತಿ**

ಪಿ.ಆರ್. 795

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟಪರಿಹಾರ ಕಾಯ್ದೆಯಡಿ ಆಯುಕ್ತರು,**
**ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ/ಕಾನಪ/F –54/07/273 ದಿನಾಂಕ: 15ನೇ ಜೂನ್ 2007**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಶ್ರೀಮತಿ ಲಕ್ಷ್ಮೀ W/o ದಾಸು ಮೊಗೇರ @ ಭಟ್ಕಳ ಸಾ: 3rd ಕ್ರಾಸ್, ಇಂದಿರಾನಗರ, ಹುಬ್ಬಳ್ಳಿ ರಸ್ತೆ, ಶಿರಸಿ.
2. ಕು:ಭಾಗ್ಯಶ್ರೀ D/o ದಾಸು ಮೊಗೇರ ಭಟ್ಕಳ, ಸಾ: 3 rd ಕ್ರಾಸ್, ಇಂದಿರಾ ನಗರ, ಹುಬ್ಬಳ್ಳಿ ರಸ್ತೆ, ಶಿರಸಿ.

1. ಶ್ರೀ ವೆಂಕಟೇಶ್ ಭಟ್ S/o ದತ್ತಾತ್ರೇಯ R/o ದತ್ತ ಮಂದಿರ ಪಕ್ಕ, 2nd ಕ್ರಾಸ್ ಕಿಲ್ಲಾ, ಸಿಬಿ.ಟಿ. ಹುಬ್ಬಳ್ಳಿ
2. ದಿ ಬ್ರಾಂಚ್ ಮೇನೇಜರ್ ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ. ಮನೆ ನಂ:2 ನಂ:3ಖೆನಿ ಬಿಲ್ಡಿಂಗ್ 1ನೇ ಮಹಡಿ, 1ನೇ ಕ್ರಾಸ್, ಗಾಂಧಿನಗರ ಬೆಂಗಳೂರು.
3. ದಿ ಡಿವಿಜನಲ್ ಮೇನೇಜರ್ ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ., ಎನ್ಕೆ ಕಾಂಪ್ಲೆಕ್ಸ್, ಕೇಶವಪೂರ, ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ: ಲಕ್ಷ್ಮೀ W/o ದಾಸು ಮೊಗೇರ @ ಭಟ್ಕಳ 2) ಕು. ಭಾಗ್ಯಶ್ರೀ D/o ದಾಸು ಮೊಗೇರ @ ಭಟ್ಕಳ ಸಾ:3ನೇ ಕ್ರಾಸ್, ಇಂದಿರಾನಗರ ಹುಬ್ಬಳ್ಳಿ ರಸ್ತೆ ಶಿರಸಿ ಇವರು ತಾವು ಮೃತ ಜಗನ್ನಾಥ S/o ದಾಸು ಮೊಗೇರ ಭಟ್ಕಳ ಇವರ ತಾಯಿ ಮತ್ತು ತಂಗಿ ಎಂದೂ ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಜಗನ್ನಾಥ S/o ದಾಸುಮೊಗೇರ @ ಭಟ್ಕಳ ಇವರು 1 ಪ್ರತಿವಾದಿಗಳಾದ ವೆಂಕಟೇಶ್ ಭಟ್ S/o ದತ್ತಾತ್ರೇಯ R/o ದತ್ತಮಂದಿರ ಪಕ್ಕ 2ನೇ ಕ್ರಾಸ್ ಹುಬ್ಬಳ್ಳಿ ಇವರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ
ಪಿ.ಆರ್. 806 ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ/ಕಾನಪ/ಎಫ್–92/07/273 ದಿನಾಂಕ: 15ನೇ ಜೂನ್ 2007**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀಮತಿ ಶಾಂತವ್ವ W/o ಭೀಮಪ್ಪ ಹೂಗಾರ ಮಾತರಂಗಿ, ರೋಣ ತಾ:ಗದಗ ಜಿ:<br>2. ಶ್ರೀ ಈರಣ್ಣ @ ವೀರೇಶ್ S/o ಭೀಮಪ್ಪ ಹೂಗಾರ, ಸಾ:ಮಾತರಂಗಿ, ರೋಣ ತಾ: ಗದಗ ಜಿ:<br>3 ಶ್ರೀ ಕಳಕಪ್ಪ S/o ಭೀಮಪ್ಪ ಹೂಗಾರ ಸಾ:ಮಾತರಂಗಿ, ರೋಣ ತಾ: ಗದಗ ಜಿ: | | 1. ಶ್ರೀ ಉಮೇಶಗೌಡ ಚನ್ನಗೌಡ ಗೌಡರ ಮಾಲೀಕರು, 3ಗಾಲಿ ರಿಕ್ಷಾ ಸಂಖ್ಯೆ: KA 25/A 325, ಸಾ:ಜುಲಕಟ್ಟು ವಿಲ್ಲೆಜ್, ಯಲಬುರ್ಗಾ ತಾ: ಕೊಪ್ಪಳ ಜಿಲ್ಲೆ.<br>2. ದಿ ಡಿವಿಜನಲ್ ಮೇನೇಜರ್, ದಿ ಓರಿಯಂಟಲ್ ಇನ್ಶ್ಯೂರೆನ್ಸ್ ಕಂ.ಲಿ. N.K. ಕಾಂಪ್ಲೆಕ್ಸ್ ಕೇಶ್ವಾಪೂರ, ಹುಬ್ಬಳ್ಳಿ |

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ: ಶಾಂತವ್ವ W/o ಭೀಮಪ್ಪ ಹೂಗಾರ ಸಾ: ಮಾತರಂಗಿ ರೋಣ ತಾ: ಗದಗ ಜಿಲ್ಲೆ 2) ಶ್ರೀ ಈರಣ್ಣ @ ವೀರೇಶ್ S/o ಭೀಮಪ್ಪ ಹೂಗಾರ 3) ಶ್ರೀ ಕೆಳಕಪ್ಪ ಭೀಮಪ್ಪ ಹೂಗಾರ ಸಾ:ಮಾತರಂಗಿ ರೋಣ ತಾ: ಗದಗ ಜಿಲ್ಲೆ ಇವರ ತಾವು ಮೃತ ಭೀಮಪ್ಪ ಬಾಳಪ್ಪ ಹೂಗಾರ ಇವರ ಹೆಂಡತಿ ಮತ್ತು ಮಕ್ಕಳು ಎಂದೂ ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಭೀಮಪ್ಪ ಬಾಳಪ್ಪ ಹೂಗಾರ ಇವರು 1ನೇ ಪ್ರತಿವಾದಿಗಳಾದ ಶ್ರೀ ಉಮೇಶ ಗೌಡ ಚನ್ನಗೌಡ ಗೌಡರ ಇವರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ
ಪಿ.ಆರ್. 807 ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು

**ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಸ್ಥಿತ್ಯಂತರ) ತರೀಕೆರೆ ಇವರ ನಡಾವಳಿಗಳು:**

**ಅಧಿಸೂಚನೆ**

**ಇ(1) 69/2007–08/ಪಿಎಸ್‌ಸಿ, ದಿನಾಂಕ:14ನೇ ಜೂನ್ 2007**

**ಉಪಸ್ಥಿತರು:** ಶ್ರೀ ಟಿ. ದಾಸೇಶ್.

**ವಿಷಯ:** ಈ ಕಛೇರಿಯಲ್ಲಿ ಕ.ಪ್ರ.ತ. ಕಾಯ್ದೆ 79 ರಡಿ ಕಾಣೆಯಾದ ರಶೀದಿ ಪುಸ್ತಕವನ್ನು ರದ್ದುಗೊಳಿಸುವ ಬಗ್ಗೆ.

**ಪ್ರಸ್ತಾವನೆ:**

ಈ ಕಛೇರಿಯಲ್ಲಿ ಉಪಯೋಗಿಸುತ್ತಿದ್ದ ಕ.ಪ್ರ.ತ ಕಾಯ್ದೆ 1979 ರಡಿಯ ರಶೀದಿ ಪುಸ್ತಕ ಕ್ರಮ ಸಂಖ್ಯೆ:069501 ರಿಂದ 069550 ರಲ್ಲಿನ ಹಾಳೆಗಳಲ್ಲಿ ಉಪಯೋಗಿಸಿ ಬಾಕಿ ಉಳಿದ ಹಾಳೆಗಳು ಕ್ರ.ಸಂ. 069526 ರಿಂದ 069550 ಗಳು ಕಛೇರಿಯಿಂದ ಕಾಣೆಯಾಗಿರುವುದರಿಂದ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ:ಸಿಬ್ಬಂದಿ:ಸಿಆರ್:4:2007–08, ದಿನಾಂಕ:5ನೇ ಜೂನ್ 2007**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಈ ಕಛೇರಿಯಲ್ಲಿ ಉಪಯೋಗಿಸುತ್ತಿದ್ದ ಕರ್ನಾಟಕ ಪ್ರವೇಶ ತೆರಿಗೆ ಕಾಯ್ದೆ 1979 ರಡಿಯ ರಶೀದಿ ಪುಸ್ತಕ ಕ್ರಮ ಸಂಖ್ಯೆ 069501 ರಿಂದ 069550 ರಲ್ಲಿ ಕ್ರ.ಸಂ. 069 501 ರಿಂದ 069525ರ ವರೆಗೆ 25 ಹಾಳೆಗಳು ಉಪಯೋಗವಾಗಿದ್ದು, ಬಾಕಿ ಕ್ರ.ಸಂ. 069526 ರಿಂದ 069550 ವರೆಗಿನ 25 ಹಾಳೆಗಳು ಈ ಕಛೇರಿಯಿಂದ ಕಾಣೆಯಾಗಿದ್ದರಿಂದ ಹಾಗೂ ಇದಕ್ಕೆ ಸಂಬಂಧಪಟ್ಟ ಕ್ರಮಗಳನ್ನು ತೆಗೆದುಕೊಂಡು ಸದರಿ ಬಾಕಿ ಉಳಿದ ಹಾಳೆಗಳು ಬೇರೆಯವರಿಂದ ದುರುಪಯೋಗ ವಾಗಬಾರದೆಂದು ನಿಶ್ಚಿಯಿಸಿ ಅವುಗಳನ್ನು ದಿನಾಂಕ:5.6.2007 ರಂದು ರದ್ದುಗೊಳಿಸಿ ಆದೇಶಿಸಲಾಗಿದೆ.

ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು
(ಸ್ಥಿತ್ಯಂತರ) ತರೀಕೆರೆ .

ಪಿ.ಆರ್. 808

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ, ನ್ಯಾಯಾಲಯ, ಉಪ ವಿಭಾಗ–1 ಬಳ್ಳಾರಿ**
**ಸಂಖ್ಯೆ:ಕಾಅಬ/ಕಾನಪ/ಸಿಆರ್–188:07/192 ದಿನಾಂಕ: 1ನೇ ಜೂನ್ 2007**

| ಅರ್ಜಿದಾರರು | ವಿರುದ್ಧ | **ಪ್ರತಿವಾದಿಗಳು** |
|---|---|---|
| 1. ಶ್ರೀಮತಿ ಮಾರೆಮ್ಮ ಗಂ.:ಮೃತ ಅಂಜಿನಿ, 20 ವರ್ಷ<br>2. ಹೆಣ್ಣು ಮಗು (3 ತಿಂಗಳು) ಮೃತ ಅಂಜನಿ ಮಗಳು<br>3. ಚಿನ್ನಾಪುರಪ್ಪ ತಂ:ಚಿನ್ನಾಪುರಪ್ಪ 55 ವರ್ಷ ಮೃತ ಅಂಜನಿ ತಂದೆ ಎಲ್ಲರ ವಾಸ:ಗೋಗಿಕಲ್ ಗ್ರಾಮ ಸಂಡೂರು (ತಾ), ಬಳ್ಳಾರಿ (ಜಿ) | | 1. ಸಿದ್ದಪ್ಪ ಜೋಗಿಕಲ್ ತಂದೆ ಬಸಪ್ಪ ಹಳೇ ಜೋಗಿಕಲ್ ವಾಹನ ಟ್ರಾಕ್ಟರ್ ನಂ ಕೆಎ–35–ಟಿ:3393 ಜೋಗಿಕಲ್ ಗ್ರಾಮ, ಸಂಡೂರು (ತಾ) ಬಳ್ಳಾರಿ (ಜಿ) ಮತ್ತು<br>2) ಇತರರು, |

**ಪ್ರಕಟಣೆ**

ಶ್ರೀಮತಿ: ಮಾರೆಮ್ಮ ಗಂಡ ಮೃತ ಅಂಜಿನಿ ಪತ್ನಿ (2) ಹೆಣ್ಣುಮಗು ಮೃತನ 3 ತಿಂಗಳ ಮಗು (3) ಚಿನ್ನಾಪುರಪ್ಪ ಮೃತ ಅಂಜನಿ ತಂದೆ 55 ವರ್ಷ ವಾಸ:ಗೋಗಿಕಲ್ ಗ್ರಾಮ ಸಂಡೂರು (ತಾ) ಬಳ್ಳಾರಿ ಜಿಲ್ಲೆ ಇವರು ಹೆಂಡತಿ, ಮಗು, ತಂದೆಯಾಗಿದ್ದು ಹಾಗೂ ಮೃತನ ಅವಲಂಬಿತರು ಎಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಅಂಜನಿ 1ನೇ ಪ್ರತಿವಾದಿಗಳಾದ ಸಿದ್ದಪ್ಪ ಜೋಗಿಕಲ್ ಇವರ ಟ್ರಾಕ್ಟರ್ ವಾಹನ ಸಂ:ಕೆಎ–35–ಟಿ–3393ರಲ್ಲಿ ಲೋಡರ್ ಆಗಿ ದಿನಾಂಕ: 22.4.07 ರಂದು ಕೆಲಸ ಮಾಡುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ಬಳ್ಳಾರಿ ಉಪ ವಿಭಾಗ–1, ಬಳ್ಳಾರಿ.

ಪಿ.ಆರ್. 786

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಬೆಂಗಳೂರು, ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ಪ್ರಕಟಣೆ**

**ಸಂಖ್ಯೆ : ಜಿಸಕಂ:ಬೆಂಗ್ರಾ:ಕಾಪಧ:ಸಿಆರ್:2:07–08 ಬೆಂಗಳೂರು ದಿನಾಂಕ: 15ನೇ ಜೂನ್ 2007**

**ವಿಷಯ:** 2007–08ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣ ಯೋಜನೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

2007–08ನೇ ಸಾಲಿಗೆ ಆಡಳಿತ ನ್ಯಾಯಾಧಿಕರಣ ಯೋಜನೆಯಲ್ಲಿ ತರಬೇತಿ ನೀಡಲು ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ. ಅದರಂತೆ, ಈ ಕೆಳಗೆ ನಮೂದಿಸಿರುವ ಷರತ್ತುಗಳನ್ನು ಪೂರೈಸಿದ ಅಭ್ಯರ್ಥಿಗಳು ಅರ್ಜಿ ಸಲ್ಲಿಸಬಹುದಾಗಿದೆ. ನಿಗಧಿತ ನಮೂನೆಯಲ್ಲಿ ಈ ಕಛೇರಿಯಿಂದ ಪಡೆಯಬಹುದು. ಈ ಪ್ರಕಟಣೆ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಒಂದು ತಿಂಗಳೊಳಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು. ನಂತರ ಬಂದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಬೆಂಗಳೂರು ಗ್ರಾಮಾಂತರ ಜಿಲ್ಲಾ ವ್ಯಾಪ್ತಿಗೆ ಬರುವ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸತಕ್ಕದ್ದು.

**ಷರತ್ತುಗಳು:**

1) ಅಭ್ಯರ್ಥಿಯ 35 ವರ್ಷ ವಯೋಮಿತಿಯೊಳಗಿರಬೇಕು
2) ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕಕ್ಕೆ ಎರಡು ವರ್ಷದ ಒಳಗೆ ಕಾನೂನು ಪದವಿಯನ್ನು ಪಡೆದಿರಬೇಕು
3) ತರಬೇತಿ ಅವಧಿ 4 ವರ್ಷಗಳಾಗಿದ್ದು, ಮಾಸಿಕ ರೂ. 1000/ಗಳ ಶಿಷ್ಯವೇತನ ನೀಡಲಾಗುವುದು.

4) ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ 20 ವರ್ಷಕ್ಕಿಂತ ಹೆಚ್ಚಿನ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ತರಬೇತಿಗೆ ನಿಯೋಜಿಸಲಾಗುವುದು
5) ಆಯ್ಕೆಯಾದ ಅಭ್ಯರ್ಥಿಗಳು ಯಾವುದೇ ಕಾರಣಕ್ಕೂ ತರಬೇತಿಯನ್ನು ಪೂರ್ಣಗೊಳಿಸದೇ ಮಧ್ಯಂತರದಲ್ಲಿ ಬಿಟ್ಟುಹೋಗಬಾರದು ಬಿಟ್ಟು ಹೋದ ಪಕ್ಷದಲ್ಲಿ ತರಬೇತಿಯ ಅವಧಿಯಲ್ಲಿ ನೀಡಿದ ಶೀಷ್ಯವೇತನವನ್ನು ಶೇ 10. ರಷ್ಟು ಬಡ್ಡಿಯೊಂದಿಗೆ ವಸೂಲಿ ಮಾಡಲಾಗುವುದು. ಈ ನಿಯಮ ಕೇಂದ್ರ ಮತ್ತು ರಾಜ್ಯ ಸರ್ಕಾರಿ ಉದ್ದಿಮೆಯಲ್ಲಿ ನೇಮಕ ಹೊಂದುವವರಿಗೆ ಅನ್ವಯಿಸುವುದಿಲ್ಲ.
6) ಸುಳ್ಳು ದಾಖಲೆ, ಮಾಹಿತಿಯನ್ನು ಒದಗಿಸಿ, ಆಯ್ಕೆಯಾದ ಅಭ್ಯರ್ಥಿಗಳನ್ನು ಕಾನೂನಿನ್ವಯ ಶಿಕ್ಷೆಗೆ ಗುರಿಪಡಿಸಲಾಗುವುದು.
7) ಅರ್ಜಿಯಲ್ಲಿನ ಮಾಹಿತಿಯು ಅಪೂರ್ಣವಾಗಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
8) ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.
9) ಅರ್ಜಿಯನ್ನು ಪಡೆಯಲು ಮತ್ತು ಸಲ್ಲಿಸಬೇಕಾದ ವಿಳಾಸ ಈ ಕೆಳಕಂಡಂತಿದೆ.
ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, 4ನೇ ಮುಖ್ಯ ರಸ್ತೆ 16ನೇ ಅಡ್ಡರಸ್ತೆ (ಪೊಲೀಸ್ ಠಾಣೆ ಎದುರು)
ಸಂಪಂಗಿ ರಾಮನಗರ, ಬೆಂಗಳೂರು–27

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್. 815

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರವರ, ನ್ಯಾಯಾಲಯದಲ್ಲಿ ಕೊಪ್ಪಳ,**
**ಪ್ರಕಟಣೆ ಸಂಖ್ಯೆ:ಕಾಅಕೊ/ಕಾನಪ/53/2007 ದಿನಾಂಕ: 5ನೇ ಜೂನ್ 2007**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಮುದುಕಪ್ಪ ತಂದೆ ಈರಪ್ಪ @ ವೀರಪ್ಪ ಮಡಿವಾಳರ್<br>2. ಪ್ರಕಾಶ ತಂದೆ ಈರಪ್ಪ @ ವೀರಪ್ಪ ಮಡಿವಾಳರ್<br>3. ಶಂಕ್ರಮ್ಮ ಗಂಡ ಸೋಮಪ್ಪ ಸಾ:ತಳಕಲ್, ತಾ:ಜಿ:ಕೊಪ್ಪಳ | | 1. ಶ್ರೀ ಬಸವರಾಜ ತಂದೆ ರಾಯಪ್ಪ ಬಿನ್ನಾಳ್ ಸ್ಟಾರ್ ಟಾಕೀಜ್ ಹತ್ತಿರ, ಕೊಪ್ಪಳ<br>2) ದಿ ಡಿವಿಜನಲ್ ಮ್ಯಾನೇಜರ್, ಓರಿಯೆಂಟಲ್ ಇನ್ಸುರೆನ್ಸ್ ಕಂ.ಲಿ. ಬಳ್ಳಾರಿ |

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಈರಪ್ಪ @ ವೀರಪ್ಪ ಮಡಿವಾಳರ್ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:17.4.2006 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮುದುಕಪ್ಪ, ಪ್ರಕಾಶ ಮತ್ತು ಶಂಕ್ರಮ್ಮ ಎಂಬುವವರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು
ಕೊಪ್ಪಳ ಜಿಲ್ಲೆ, ಕೊಪ್ಪಳ

ಪಿ.ಆರ್. 820

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ,**
**ಗದಗ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ:ಕಾಅಗ/ಕಾನಪ/F–29/07/272 ದಿನಾಂಕ: 15ನೇ ಜೂನ್ 2007**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| ಶ್ರೀಮತಿ ಗೌರಮ್ಮ W/o ಶಂಕರಗೌಡ ಮಲ್ಲಾಪುರ ಸಾ:ಲಕ್ಕುಂಡಿ ತಾ: | | 1. ಬಾಬಾಜಾನ್ ಕೆ. ಸವಣೂರು ಸಾ: ಬಾನಿಗಲ್ಲಿ, ಹುಬ್ಬಳ್ಳಿ, ಧಾರವಾಡ ಜಿಲ್ಲೆ<br>2. ದಿ ಡಿವಿಜನಲ್ ಮೇನೇಜರ್, ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ. ಶ್ರೀನಾಥ್ ಕಾಂಪ್ಲೆಕ್ಸ್, N.G. ಮಾರ್ಕೆಟ್ ಹುಬ್ಬಳ್ಳಿ– 580029 |

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ: ಗೌರಮ್ಮ W/o ಶಂಕರಗೌಡ ಮಲ್ಲಾಪುರ ಸಾ:ಲಕ್ಕಂಡಿ ಗದಗ ತಾ: ಜಿ: ಅನ್ನಪೂರ್ಣ ಇವರ ತಾಯಿ ಮತ್ತು ಎಂದೂ ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಅನ್ನಪೂರ್ಣ ಇವರು ಒಂದನೇ ಪ್ರತಿವಾದಿಗಳಾದ ಬಾಬಾಜಾನ್ ಕೆ. ಸವಣೂರು ಸಾ: ಬಾನಿಗಲ್ಲೀ ಹುಬ್ಬಳ್ಳಿ, ಧಾರವಾಡ ಜಿಲ್ಲೆ ಇವರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ
ಪಿ.ಆರ್. 821 ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ/ಕಾನಪ/F–35/07/272 ದಿನಾಂಕ: 15ನೇ ಜೂನ್ 2007**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಯಮನೂರುಸಾಬ್ ಲಾಡ್‌ಸಾಬ್ ಮ್ಯಾಗೇರಿ, ಸಾ: ರಾಮಾಪುರ, ರೋಣ ತಾ: ಗದಗ ಜಿಲ್ಲೆ<br>2) ಬುಡ್ಡಿಮ W/o ಯಮನೂರುಸಾಬ್ ಮ್ಯಾಗೇರಿ, ಸಾ:ರಾಮಾಪುರ, ರೋಣ ತಾ: ಗದಗ ಜಿಲ್ಲೆ. | | 1. ಶಿರಾಜ್ ಶೇಖ್ W/o ಅಲ್ಲಾಭಕ್ಷಿ ಭಾಗ್ಯ ಜ್ಯೋತಿ ಕಾಲೋನಿ 12ನೇ ಯಾರ್ಡ ಸಂಡೂರು, ಬಳ್ಳಾರಿ.<br>2. ದಿ ಬ್ರಾಂಚ್ ಮೇನೇಜರ್, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ. ಗಾಂಧಿ ಸರ್ಕಲ್ ಪಿ.ಬಿ. ರಸ್ತೆ, ಗದಗ |

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ: ಯಮನೂರುಸಾಬ್ ಲಾಡಸಾಬ್ ಮ್ಯಾಗೇರಿ 2) ಬುಡ್ಡಿಮ W/o ಯಮನೂರುಸಾಬ್ ಮ್ಯಾಗೇರಿ ಸಾ:ರಾಮಾಪುರ ರೋಣ ತಾ: ಗದಗ ಜಿಲ್ಲೆ ಇವರ ತಾವು ಮೃತ ಹುಸೇನಸಾಬ ಯಮನೂರುಸಾಬ್ ಮ್ಯಾಗೇರಿ ಇವರ ತಂದೆ ಮತ್ತು ತಾಯಿ ಎಂದೂ ಅವರ ಮರಣದಿದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹುಸೇನಸಾಬ ಯಮನೂರು ಸಾಬ್ ಮ್ಯಾಗೇರಿ ಇವರು ಒಂದನೇ ಪ್ರತಿವಾದಿಗಳಾದ ಶಿರಾಜ್ ಶೇಖ್ S/o ಅಲ್ಲಾಭಕ್ಷಿ ಬಳ್ಳಾರಿ ಇವರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ
ಪಿ.ಆರ್. 822 ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ/ಕಾನಪ/F–36/07/272 ದಿನಾಂಕ: 15ನೇ ಜೂನ್ 2007**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| ಲಲಿತಾ D/o ಸಿದ್ದಪ್ಪ ಮಲ್ಲಸಮುದ್ರ ಸಾ: ಹೆಚ್.ಎಸ್. ವೆಂಕಟಾಪುರ, ಗದಗ ತಾ:ಜಿ: | | 1. ಆರ್.ಎನ್. ನಾಯಕ್ ಆ್ಯಂಡ್ ಕಂಪನಿ ಪಿ.ಬಿ. ರಸ್ತೆ, ಸತ್ತೂರು, ಧಾರವಾಡ.<br>2. ಯುನೈಟೆಡ್ ಇಂಡಿಯಾ ಇನ್ ಶ್ಯೂರೆನ್ಸ್ ಕಂ.ಲಿ. ನ್ಯೂ ಕಾಟನ್ ಮಾರ್ಕೆಟ್ ಹುಬ್ಬಳ್ಳಿ |

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ: ಲಲಿತಾ D/o ಸಿದ್ದಪ್ಪ ಮಲ್ಲಸಮುದ್ರ ಸಾ: ಹೆಚ್.ಎಸ್. ವೆಂಕಟಾಪುರ ಗದಗ ತಾ: ಜಿ: ಸಿದ್ದಪ್ಪ ಅಂದಪ್ಪ ಮಲ್ಲಸಮುದ್ರ ಇವರ ಹೆಂಡತಿ ಮತ್ತು ಎಂದೂ ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಿದ್ದಪ್ಪ ಅಂದಪ್ಪ ಮಲ್ಲಸಮುದ್ರ ಇವರು ಒಂದನೇ ಪ್ರತಿವಾದಿಗಳಾದ ಆರ್.ಎನ್. ನಾಯಕ್ ಮತ್ತು ಕಂಪನಿ ಪಿ.ಬಿ. ರಸ್ತೆ ಸತ್ತೂರು, ಧಾರವಾಡ ಇವರಲ್ಲಿ ಸೂಪರ್ ವೈಸರ್ ಆಗಿ ಕೆಲಸ

ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದಿರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ
ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು

ಪಿ.ಆರ್. 823

## 3ನೇ ಹಣಕಾಸು ಆಯೋಗ
## ಅಧಿಸೂಚನೆ
### ಸಂಖ್ಯೆ:ಮೂರಾಹಆ:39:ಇತರ:2007, ಬೆಂಗಳೂರು, ದಿನಾಂಕ: 30ನೇ ಮೇ 2007

**ವಿಷಯ:** ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005ರ ಕಲಂ 4(1) ಬಿ ಅನುಸಾರ, 3ನೇ ರಾಜ್ಯ ಹಣಕಾಸು ಆಯೋಗದ ಮಾಹಿತಿಯನ್ನು ಪ್ರಕಟಿಸುವ ಬಗ್ಗೆ.

ಮಾಹಿತಿ ಹಕ್ಕು ಅಧಿನಿಯಮ 2005ರ ಕಲಂ 5(1)ರ ಮೇರೆಗೆ ಶ್ರೀಮತಿ ಸುಮಿತ್ರಾ ಆರ್ ಕುಲಕರ್ಣಿ ಶಾಖಾಧಿಕಾರಿ, 3ನೇ ರಾಜ್ಯ ಹಣಕಾಸು ಆಯೋಗ, ಕೊಠಡಿ ಸಂಖ್ಯೆ:250, ಗೇಟ್ ನಂ. 1, 2ನೇ ಮಹಡಿ ಬಹುಮಹಡಿ ಕಟ್ಟಡ, ಬೆಂಗಳೂರು, ಇವರನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಿಸಲಾಗಿದೆ.

ಮಾಹಿತಿ ಹಕ್ಕು ಅಧಿನಿಯಮ 2005ರ ಕಲಂ 19(1) ರ ಮೇರೆಗೆ ಶ್ರೀ ಕೆ.ಆರ್. ವಲ್ಲೂರ ಅಧೀನ ಕಾರ್ಯದರ್ಶಿ,ಮ 3ನೇ ರಾಜ್ಯ ಹಣಕಾಸು ಆಯೋಗ ಕೊಠಡಿ ಸಂಖ್ಯೆ: 249, ಗೇಟ್ ನಂ. 1,2ನೇ ಮಹಡಿ ಬಹುಮಹಡಿ ಕಟ್ಟಡ, ಬೆಂಗಳೂರು, ಇವರನ್ನು "ಮೇಲ್ಮನವಿ ಪ್ರಾಧಿಕಾರಿ" ಗಳೆಂದು ನೇಮಿಸಲಾಗಿದೆ.

**ಕೆ.ಆರ್. ಶಶಿಧರ**
ಕಾರ್ಯದರ್ಶಿ,
3ನೇ ರಾಜ್ಯ ಹಣಕಾಸು ಆಯೋಗ

ಪಿ.ಆರ್. 811

## ಕಂದಾಯ ಸಚಿವಾಲಯ
## ತಿದ್ದುಪಡಿ ಅಧಿಸೂಚನೆ
### ಸಂಖ್ಯೆ ಕಂಇ 496 ಬಿಎಂಎಂ 2005 ದಿನಾಂಕ:4ನೇ ಜೂನ್ 2007

ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 496 ಬಿಎಂಎಂ 2005 ದಿನಾಂಕ 24.8.2006 ರಂದು ಕರ್ನಾಟಕ ರಾಜ್ಯಪತ್ರದಲ್ಲಿ (ವಿಶೇಷ ಪತ್ರಿಕೆ) ಪ್ರಕಟಿಸಿದ ರಾಜ್ಯ ಮಟ್ಟದ ಉಪ ತಹಸೀಲ್ದಾರ್/ಶಿರಸ್ತೇದಾರ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ನೌಕರರುಗಳ ಹೆಸರು, ಹುಟ್ಟಿದ ದಿನಾಂಕ: ನೇಮಕಾತಿ ದಿನಾಂಕ, ಡಿ.ಆರ್. ಬದಲು ಪಿ.ಆರ್ ಎಂದು ತಪ್ಪಾಗಿ ಮುದ್ರಿತವಾಗಿರುವುದು, ಜೇಷ್ಠತೆಯನ್ನು ಸರಿಯಾಗಿ ನಿಗದಿಪಡಿಸದೇ ಇರುವ ಬಗ್ಗೆ ಕೆಲವಾರು ನೌಕರರು ಸಕಾರಕ್ಕೆ ಮನವಿ ಸಲ್ಲಿಸಿ ಅಂತಿಮ ಜೇಷ್ಠತಾ ಪಟ್ಟಿಯಲ್ಲಿರುವ ದೋಷಗಳನ್ನು ಸರಿಪಡಿಸಲು ಕೋರಿದ್ದರು. ಈ ಮನವಿಗಳ ಜೊತೆ ನೌಕರರು ಸಲ್ಲಿಸಿರುವ ದಾಖಲೆಗಳನ್ನು ಪರಿಶೀಲಿಸಿ ಮತ್ತು ಸಂಬಂಧಿಸಿದ ಜಿಲ್ಲಾಧಿಕಾರಿಗಳು ನೀಡಿರುವ ವರದಿಗಳನ್ನು ಆಧರಿಸಿ ಅಂತಿಮ ಜೇಷ್ಠತಾ ಪಟ್ಟಿಯ ಅಧಿಸೂಚನೆ ಸಂಖ್ಯೆ:ಕಂಇ 496 ಬಿಎಂಎಂ 2005 ದಿನಾಂಕ:24.8.06 ರಲ್ಲಿ ಪ್ರಕಟಗೊಂಡಿರುವ ಜೇಷ್ಠತಾ ಪಟ್ಟಿಗೆ ಈ ಕೆಳಗಿನಂತೆ ತಿದ್ದುಪಡಿ ಮಾಡಲಾಗಿದೆ.

| ಕ್ರ. ಸಂ | ರಾಜ್ಯ ಮಟ್ಟದ ಶಿರಸ್ತೇದಾರರ ಜೇಷ್ಠತಾ ಪಟ್ಟಿಯಲ್ಲಿನ ಕ್ರಮಸಂಖ್ಯೆ | ನೌಕರರ ಹೆಸರು ಶ್ರೀ/ಶ್ರೀಮತಿ | ಡಿಆರ್ ಪಿಆರ್ | ವಿಭಾಗ | ಹುಟ್ಟಿದ ದಿನಾಂಕ | ನೌಕರರು ಸೇವೆಗೆ ಸೇರಿದ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|---|
| 01 | 3592ಎ | ಯು.ಎನ್. ಚಿದಂಬರ | ಡಿಆರ್ | ಮೈಸೂರು | 27.2.51 | 6/7/73 | 14.8.81 | ಶಿರಸ್ತೇದಾರ್ |
| 02 | 3626ಎ | ಆರ್ ಹನುಮರೆಡ್ಡಿ | ಡಿಆರ್ | ಮೈಸೂರು | 28.1ಪ2 | 19.2.75 | 14.8.81 | ಶಿರಸ್ತೇದಾರ್ |
| 03 | 3871ಎ | ಕೆ. ಸದಾನಂದಪ್ಪ | ಡಿಆರ್ | ಬೆಂಗಳೂರು | 7.5.51 | 10.2.77 | 24.10.82 | ಶಿರಸ್ತೇದಾರ್ |
| 04 | 3889ಸಿ | ಬಿ.ಡಿ. ಗುಗರಟ್ಟಿ | ಡಿಆರ್ | ಬೆಳಗಾವಿ | 20.5.52 | 14.2.77 | 19.11.82 | ಶಿರಸ್ತೇದಾರ್ |
| 05 | 3889ಇ | ಜಿ.ಎಲ್. ಬಿ. ಪಾಟೀಲ | ಡಿಆರ್ | ಬೆಳಗಾವಿ | 31.5.52 | 14.2.77 | 19.11.82 | ಶಿರಸ್ತೇದಾರ್ |
| 06 | 3889ಎಫ್ | ಆರ್.ಕೆ. ಕಟ್ಟಿ | ಡಿಆರ್ | ಬೆಳಗಾವಿ | 21.12.51 | 14.2.77 | 19.11.82 | ಶಿರಸ್ತೇದಾರ್ |
| 07 | 3898ಎ | ಹೆಚ್.ಕೆ. ನಾನಾವಟೆ | ಡಿಆರ್ | ಬೆಳಗಾವಿ | 11.6.54 | 14.2.77 | 19.11.82 | ಶಿರಸ್ತೇದಾರ್ |
| 08 | 3898ಬಿ | ಎ.ಹೆಚ್. ಆಲೂರ | ಡಿಆರ್ | ಬೆಳಗಾವಿ | 11.5.53 | 14.2.77 | 19.11.82 | ಶಿರಸ್ತೇದಾರ್ |
| 09 | 4001ಡಿ | ರಫೀಕ್ ಅಹ್ಮದ್ | ಡಿಆರ್ | ಬೆಳಗಾವಿ | 12.5.51 | 18.3.77 | 23.5.84 | ಶಿರಸ್ತೇದಾರ್ |

| ಕ್ರ. ಸಂ | ರಾಜ್ಯ ಮಟ್ಟದ ಶಿರಸ್ತೇದಾರರ ಜೇಷ್ಠತಾ ಪಟ್ಟಿಯಲ್ಲಿನ ಕ್ರಮಸಂಖ್ಯೆ | ನೌಕರರ ಹೆಸರು ಶ್ರೀ/ಶ್ರೀಮತಿ | ಡಿಆರ್ ಪಿಆರ್ | ವಿಭಾಗ | ಹುಟ್ಟಿದ ದಿನಾಂಕ | ನೌಕರರು ಸೇವೆಗೆ ಸೇರಿದ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|---|
| 10 | 4100ಎ | ಕೃಷ್ಣಯ್ಯ. ಕೆ | ಡಿಆರ್ | ಮೈಸೂರು | 7.2.53 | 28.3.77 | 26.5.86 | ಶಿರಸ್ತೇದಾರ್ |
| 11 | 4051ಎ | ಜಿ.ಆರ್. ಶ್ರೀನಿವಾಸ್ | ಡಿಆರ್ | ಮೈಸೂರು | 9.8.54 | 22.2.77 | 23.5.84 | ಶಿರಸ್ತೇದಾರ್ |
| 12 | 4066ಎ | ಎಸ್.ಎಂ. ರಂಗ ಧಾಳ್ | ಡಿಆರ್ | ಬೆಳಗಾವಿ | 1.1.53 | 1.3.77 | 23.5.84 | ಶಿರಸ್ತೇದಾರ್ |
| 13 | 4765ಎ | ಎ.ಹೆಚ್. ಕುಡತರಕರ | | ಬೆಳಗಾವಿ | 4.7.57 | 28.4.77 | 3.4.91 | ಶೀಘ್ರ ಲಿಪಿಗಾರರು |

ಮೇಲ್ಕಂಡ ನೌಕರರ ಹೆಸರುಗಳನ್ನು ದಿನಾಂಕ:24.8.06 ರಂದು ಪ್ರಕಟವಾದ ರಾಜ್ಯಮಟ್ಟದ ಶಿರಸ್ತೇದಾರ/ಉಪ ತಹಶೀಲ್ದಾರ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ 4761, 4395, 4396, 4397,4398, 4411, 5285ನ್ನು ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 810

**ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಸೇವೆಗಳು)

**ಕಂದಾಯ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಕಂಇ 100 ಎಲ್ಆರ್ಎಂ 2005, ಬೆಂಗಳುರು, ದಿನಾಂಕ:12ನೇ ಜೂನ್ 2007**

ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ, ಯಳಂದೂರು, ಚಾಮರಾಜನಗರ ಜಿಲ್ಲೆ, ಇವರು ಬಿಳಿಗಿರಿರಂಗನಬೆಟ್ಟ ಗ್ರಾಮದ ಸರ್ವೆ ನಂಬರ್ 4/6 ರಲ್ಲಿ 37 ಗುಂಟೆ, ಸ.ನಂ. 4/10ಪಿ 1 ರಲ್ಲಿ 1 ಎಕರೆ ಸ.ನಂ. 4/80 ರಲ್ಲಿ 2 ರ ಎಕರೆ 1 ಗುಂಟೆ, ಸ.ನಂ. 4/9 1 ಎಕರೆ, ಸ.ನಂ. 4/ಪಿ5 ರಲ್ಲಿ 5 ಎಕರೆ 11 ಗುಂಟೆ, ಸ.ನಂ. 4/60 ಪಿ2 ರಲ್ಲಿ 2 ಎಕರೆ, ಸ.ನಂ. 4/5ರಲ್ಲಿ 1 ಎಕರೆ 35 ಗುಂಟೆ ಹೀಗೆ ಒಟ್ಟು 14 ಎಕರೆ 4 ಗುಂಟೆ ಜಮೀನನ್ನು ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ ಯಳಂದೂರು, ಇವರಿಗೆ ಶೈಕ್ಷಣಿಕ ಸೇವಾ ಚಟುವಟಿಕೆಗಳಿಗೆ ದಾನವಾಗಿ ಪಡೆಯಲು ಮಾಡಿದ ಬೇಡಿಕೆ ಹಾಗೂ ನಮೂನೆ 15ಎ ಮತ್ತು 15ಎಎಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ಇವರು ತಮ್ಮ ಪತ್ರ ಸಂ.ಎಲ್ ಆರ್ ಎಫ್ /ಸಿಆರ್/. 62/2003–04 ದಿನಾಂಕ:23.8.2005 ಹಾಗೂ ದಿನಾಂಕ:27.1.2006 ರಲ್ಲಿ ಪ್ರಸ್ತಾಫಿತ ಗ್ರಾಮದ ಮೇಲ್ಕಂಡ ಸರ್ವೆ ನಂಬರುಗಳಲ್ಲಿ ಒಟ್ಟು 14 ಎಕರೆ 4 ಗುಂಟೆ ಜಮೀನನ್ನು ದಾನವಾಗಿ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961 ರ ಕಲಂ 109 (1ಎ) ರಡಿ ಸರ್ಕಾರದ ಅನುಮತಿ ನೀಡಲು ಶೀಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಮಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ..

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63/79ಎ/79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ)ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996 ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯಿತಿ ನೀಡಿ, ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ ಯಳಂದೂರು ಇವರಿಗೆ ಚಾಮರಾಜನಗರ ಜಿಲ್ಲೆ, ಬಿಳಿಗಿರಿರಂಗನಬೆಟ್ಟ ಗ್ರಾಮದ ಸರ್ವೆ ನಂಬರ್ 4/6 ರಲ್ಲಿ 37 ಗುಂಟೆ, ಸ.ನಂ. 4/10ಪಿ1 ರಲ್ಲಿ 1 ಎಕರೆ, ಸ.ನಂ. 4/80 ರಲ್ಲಿ 2 ಎಕರೆ 1 ಗುಂಟೆ ಸ.ನಂ. 4/9ರಲ್ಲಿ 1 ಎಕರೆ, ಸ.ನಂ. 4/ಪಿ5 ರಲ್ಲಿ 5 ಎಕರೆ 11 ಗುಂಟೆ, ಸ.ನಂ. 4/60ಪಿ2ರಲ್ಲಿ 2 ಎಕರೆ ಸ.ನಂ. 4/5 ರಲ್ಲಿ 1 ಎಕರೆ 35 ಗುಂಟೆ ಹೀಗೆ ಒಟ್ಟು 14 ಎಕರೆ 4 ಗುಂಟೆ ಜಮೀನನ್ನು ಶೈಕ್ಷಣಿಕ ಸೇವಾ ಚಟುವಟಿಕೆಗಳ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 109(1ಎ) ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೇ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961 ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ /ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 814

**ಬಿ. ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಭೂಸುಧಾರಣೆ)

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**
**ನಂ:ಇಎಕ್ಸ್ ಇ. ಡಿಟಿಸಿಆರ್ಎಂ:194:2003–04 ದಿನಾಂಕ:12ನೇ ಜೂನ್ 2007**

**ಉಪಸ್ಥಿತರು :** ಹೆಚ್.ಎನ್. ಆನಂದ್
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧಿಕ್ಷಕರು,
ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ

**ಫಿರ್ಯಾದುದಾರರು:** ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ, ಮಡಿಕೇರಿ

**ವಿರುದ್ಧ:**

**ಆರೋಪಿಗಳು:** 1. ಕೊಪ್ಪಂಗಡ ಉತ್ತಪ್ಪ, ತ:ಜಾತಿ :ಕುಂಇಣ್ಣ ಅರಪಟ್ಟು ಗ್ರಾಮ, ಕಡಂಗ ಅಂಚೆ, ವಿರಾಜಪೇಟೆ
2. ಕ್ರಿಶ್ಚಿಯನ್ ಪಿ. ಜಾನ್ಸ್‌ನ್ ತಂದೆ:ಕುರಿಯ ಕೋಸೆ, ಪಣತಣ ಅಂಚೆ, ಕೊಳಕಾಡು ಗ್ರಾಮ ಇರಿಟ್ಟಿ ತಾಲ್ಲೂಕು, ಕಣ್ಣಾನೂರು ಜಿಲ್ಲೆ.

ದಿನಾಂಕ: 31.3.2004 ರ ಸಮಯ ಸುಮಾರು 9.30 ಗಂಟೆಗೆ ಮಡಿಕೇರಿ ತಾಲ್ಲೂಕು ಅಬಕಾರಿ ಉಪ ವಿಭಾಗದ ಉಪ ನಿರೀಕ್ಷಕರು ತಮ್ಮ ಸಿಬ್ಬಂದಿಯೊಂದಿಗೆ ಅಬಕಾರಿ ಗಸ್ತಿನ ಮೇಲೆ ಅರಪಟ್ಟು ಗ್ರಾಮದಿಂದ ಮೂರ್ನಾಡಿಗೆ ಬರುವ ಮಣ್ಣರಸ್ತೆಯಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ ಅರಪಟ್ಟು ಗ್ರಾಮದ, ಕೈಪಂಗಡ ಉತ್ತಪ್ಪ ಹಾಗೂ ಕ್ರಿಶ್ಚಿಯನ್ ಜಾತಿಯ ಪಿ. ಜಾನ್ಸನ್ ಎಂಬುವರು ಒಂದು ಬೈಕಿನಲ್ಲಿ ಅಕ್ರಮ ಸೇಂದಿಯನ್ನು ಮಾರಾಟ ಮಾಡಲು ಸಾಗಿಸುತ್ತಿದ್ದಾರೆಂಬ ಜರೂರು ವರ್ತಮಾನದ ಮೇರೆಗೆ ಆಧಿಕಾರಿಗಳು ಸದರಿ ರಸ್ತೆಯಲ್ಲಿ ಬೈಕ್ ಸಂ;ಕೆಎ–12–ಇ–3037 ಬರುತ್ತಿದ್ದ ಒಂದು ಬೈಕ್‌ನ್ನು ತಡೆಮ ನಿಲ್ಲಿಸಲಾಗಿ ಅದರಲ್ಲಿ ಇಬ್ಬರು ವ್ಯಕ್ತಿಗಳು ಇದ್ದು, ಒಂದನೇ ವ್ಯಕ್ತಿಯು ಬೈಕನ್ನು ಚಲಿಸುತ್ತಿದ್ದು. ಹಿಂದೆ ಕುಳಿತ ವ್ಯಕ್ತಿಯ ಎರಡು ಕೈಗಳಲ್ಲಿ ಎರಡು ಪ್ಲಾಸ್ಟಿಕ್ ಕ್ಯಾನುಗಳು ಇರುವುದು ಕಂಡು ಬಂತು. ಇದು ಏನೆಂದು ಕೇಳಲಾಗಿ ಸೇಂದಿ ಎಂದು ತಿಳಿಸಿದನು. ಇದನ್ನು ಹೊಂದಿರಲು ಪರ್ಮಿಟ್ ವಗ್ಯೆರೆ ಇದೆಯೇ ಎಂದು ಕೇಳಲಾಗಿ ಯಾವುದೂ ಇಲ್ಲವೆಂದು ತಿಳಿಸಿದರು. ನಂತರ ಕ್ಯಾನನ್ನು ಪರಿಶೀಲಿಸಲಾಗಿ ಆತನ ಒಂದು ಕೈಯಲಿದ್ದ ಕ್ಯಾನ್ 20 ಲೀಟರ್ ಹಿಡಿಯುವ ಕ್ಯಾನ್ ಆಗಿದ್ದು., ಅದರಲ್ಲಿ 20 ಲೀ ಸೇಂದಿ ಇದ್ದು ಆತನ ಎಡ ಕೈಯಲ್ಲಿ 10 ಲೀಟರ್ ಕ್ಯಾನ್ ಇದ್ದು, ಅದರಲ್ಲಿ 10 ಲೀಟರ್ ಸೇಂದಿ ಇರುವುದು ಕಂಡು ಬಂದಿರುತ್ತದೆ. ಇವುಗಳಿಂದ ರಾಸಾಯನಿಕ ಪರೀಕ್ಷೆಗೆಂದು 375 ಎಂ.ಎಲ್.ನ ಎರಡು ಸೀಸೆಗಳನ್ನು ಬೇರೆ ಬೇರೆಯಾಗಿ ಮಾದರಿ ತೆಗೆಯಲಾಗಿರುತ್ತದೆ. ಆರೋಪಿಗಳ ಹೆಸರು ವಿಳಾಸ ಕೇಳಲಾಗಿ ಬೈಕ್ ಚಲಿಸುತ್ತಿದ್ದಾತನ ಹೆಸರು ಕೈಪಂಗಡ ಉತ್ತಪ್ಪ, ತಂದೆ:ಪೌತಿ:ಕುಂಇಣ್ಣ ಅರಪಟ್ಟು ಗ್ರಾಮ, ಕಡಂಗ, ಅಂಚೆ ವಿರಾಜಪೇಟೆ ತಾಲ್ಲೂಕು, 2ನೇ ಆರೋಪಿ ಕ್ರಿಶ್ಚಿಯನ್ ಪಿ ಜಾನ್ಸನ್

ಎಂದೂ,. ವಾಹನ ನೋಂದಣಿ ಸಂ:ಕೆಎ–12–ಇ–3037 ಆಗಿದ್ದು ಈ ರೀತಿ ರಹದಾರಿ ಇಲ್ಲದೆ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದುದು ಕರ್ನಾಟಕ ರಾಜ್ಯ ಅಬಕಾರಿ ಕಾಯಿದೆ 1965 ಎ ಕಲಂ 11.13.14 ಆರ್:ಡಬ್ಲ್ಯೂ:32(ಎ), 43 ರಂತೆ ಅಪರಾಧವಾದ್ದರಿಂದ ವಾಹನ ಮತ್ತು ಸ್ವೊತ್ತನ್ನು ವಶಪಡಿಸಿಕೊಂಡು ಮೊಕದ್ದಮೆ ಸಂ:30:2003–04 ದಿನಾಂಕ:13.3.2004 ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಮುಂದಿನ ಕ್ರಮದ ಬಗ್ಗೆ ನ್ಯಾಯಾಲಯಕ್ಕೆ ವರದಿ ಸಲ್ಲಿಸಿರುತ್ತಾರೆ.

ನಂತರ ವಾಹನದ ಅಧಿಕೃತ ಮಾಲೀಕರನ್ನು ಪತ್ತೆ ಹಚ್ಚುವ ಸಲುವಾಗಿ ದಿನಾಂಕ:6.4.2004 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರಿಗೆ ಪತ್ರ ಬರೆಯಲಾಗಿದ್ದು, ಅದರಿಂದ ದಿನಾಂಕ:24.4.2004 ರಂದು ವಾಹನಕ್ಕೆ ಸಂಬಂಧಿಸಿ ಅಧಿಕೃತ ಮಾಲೀಕರ ಹೆಸರು ನೋಂದಾಯಿಸಿರುವ 'ಬಿ' ಎಕ್ಸಾಟ್ರಾಕ್ಟ್‌ನ್ನು ಸಲ್ಲಿಸಿರುತ್ತಾರೆ ಅದರಲ್ಲಿ ನಮೂದಿಸಿರುವಂತೆ ಶ್ರೀ ಕೆ.ಕೆ. ಕುಟ್ಟಪ್ಪ, ತಂದೆ:ಕೆ.ಬಿ. ಕುಂಟಣ್ಣ, ಅರಪಟ್ಟು ಗ್ರಾಮ ಮತ್ತು ಅಂಚೆ, ವಿರಾಜಪೇಟೆ ತಾಲ್ಲೂಕು ಎಂದು ನಮೂದಿಸಿರುತ್ತಾರೆ. ಇದರ ಆಧಾರದ ಮೇಲೆ ಶ್ರೀ ಕುಟ್ಟಪ್ಪ, ಕೆ.ಕೆ. ತಂದೆ ಕೆ.ಬಿ. ಕುಂಟಣ್ಣ, ಅರಪಟ್ಟು ಗ್ರಾಮ, ಕಡಂಗ ಅಂಚೆ, ವಿರಾಜಪೇಟೆ ತಾಲ್ಲೂಕು ಇವರಿಗೆ ದಿನಾಂಕ: 6.5.2004 ರಂದು ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿತ್ತು. ಸದರಿ ನೋಟಿಸ್ ವಾಹನದ ಮಾಲೀಕರಿಗೆ ತಲುಪಿದ್ದು, ಅದರಿಂದ ಸ್ವೀಕೃತಿಗೊಂಡ ಪತ್ರ ಬಂದಿರುತ್ತದೆ. ಸದರಿ ನೋಟೀಸಿಗೆ ಉತ್ತರವಾಗಿ ವಾಹನದ ಮಾಲೀಕರ ಪರ ವಕೀಲರು ದಿನಾಂಕ:10.6.04 ರಂದು ಅರ್ಜಿಯನ್ನು ಸಲ್ಲಿಸಿ ವಾಃನವನ್ನು ಮಧ್ಯಂತರ ವಶಕ್ಕೆ ನೀಡಬೇಕಾಗಿ ಕೋರಿಕೊಂಡಿರುತ್ತಾರೆ. ವಾಹನ ಮಾಲೀಕರ ಕೋರಿಕೆಯಂತೆ ವಾಹನಕ್ಕೆ ಮೌಲ್ಯವನ್ನು ನಿಗದಿಪಡಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರಿಗೆ ದಿನಾಂಕ:28.6.2004 ರಂದು ಪತ್ರ ಬರೆಯಲಾಗಿದ್ದು, ಅವರಿಂದ ದಿನಾಂಕ:28.6.2004 ರಂದು ಬಂದ ದೃಢೀಕರಣ ಪತ್ರದಲ್ಲಿ ವಾಹನಕ್ಕೆ ಮೌಲ್ಯವನ್ನು 7500.00 ರೂ. (ರೂಪಾಯಿ ಏಳು ಸಾವಿರದ ಐನೂರು ಮಾತ್ರ) ಎಂದು ನಿಗದಿಪಡಿಸಿರುತ್ತಾರೆ.

ತದನಂತರ ವಶಪಡಿಸಿಕೊಂಡ ಸೇಂದಿಯನ್ನು ದಿನಾಂಕ: 16.5.2005 ರಂದು ಮಂಗಳೂರಿನ ರಾಸಾಯನಿಕ ಕೇಂದ್ರದಲ್ಲಿ ರಾಸಾಯನಿಕ ಪರೀಕ್ಷೆಗೆ ಒಳಪಡಿಸಲಾಗಿದ್ದು ತಜ್ಞರ ವರದಿಯ ಪ್ರಕಾರ ಸದರಿ ಸೇಂದಿಯಲ್ಲಿ ಆಲ್ಕೋಹಾಲ್ ಪ್ರಮಾಣ ಇರುವುದಾಗಿ ದೃಢಿಕರಿಸಿ ವರದಿ ಸಲ್ಲಿಸಿರುತ್ತಾರೆ. ರಾಸಾಯನಿಕ ದೃಢಿಕರಣದ ಪ್ರಕಾರ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮಡಿಕೇರಿ ಇವರು ದಿನಾಂಕ:8.11.2005 ರಂದು ವರದಿಯನ್ನು ಸಲ್ಲಿಸಿ ವಶಪಡಿಸಿಕೊಂಡ ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶಿಬೇಕಾಗಿ ಕೋರಿದ್ದರಿಂದ ಈ ಕಛೇರಿಯ ದಿನಾಂಕ:22.12.2005 ರ ಆದೇಶದಲ್ಲಿ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲಾಗಿದೆ.

ತದನಂತರ ವಾಹನಕ್ಕೆ ಸಂಬಂಧಪಟ್ಟ ಪ್ರಕರಣದ ಬಗ್ಗೆ ಈ ನ್ಯಾಯಾಲಯದಲ್ಲಿ ವಿಚಾರಣೆಯನ್ನು ನಡೆಸುವ ಸಲುವಾಗಿ ದಿನಾಂಕ: 14.12.2006, 1.2.2007 ರಂದು ಸಮನ್ಸ್ ನೀಡಲಾಗಿತ್ತು. ವಾಹನದ ಮಾಲೀಕರು ಸಮನ್ಸ್ ಪ್ರತಿಯನ್ನು ಖುದ್ದಾಗಿ ಪಡೆದುಕೊಂಡರೂ ಸಹ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ., ನಂತರ ವಾಹನಗಳ ಮಾಲೀಕರು ನ್ಯಾಯಾಲಯಕ್ಕೆ ಗೈರು ಹಾಜರಾಗುತ್ತಿರುವುದರಿಂದ ಇವರಿಗೆ ದಿನಾಂಕ:24.2.2007 ರಂದು ಪುನಃ ಕಾರಣ ಕೇಳಿ ನೋಟೀಸ್ ನೀಡಿ ನ್ಯಾಯಾಲಯಕ್ಕೆ ಹಾಜರಾಗದಿದ್ದಲ್ಲಿ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಾಗಿ ಸೂಚನೆ ನೀಡಲಾಗಿತ್ತು.. ಸದರಿ ನೋಟೀಸಿಗೆ ದಿನಾಂಕ:7.3.2007 ರಂದು ವಾಹನದ ಮಾಲೀಕರಾದ ಶ್ರೀ ಕುಟ್ಟಪ್ಪ ಇವರು ಉತ್ತರ ನೀಡಿದ್ದು, ವಾಹನವನ್ನು ತನ್ನ ವಶಕ್ಕೆ ನೀಡಬೇಕಾಗಿ ಕೋರಿಕೊಂಡಿರುತ್ತಾರೆ.

ವಾಹನವನ್ನು ಮಧ್ಯಂತರ ವಶಕ್ಕೆ ನೀಡುವ ಬಗ್ಗೆ ಈ ನ್ಯಾಯಾಲಯದಲ್ಲಿ ಪರಿಗಣಿಸಿ ಆದೇಶ ನೀಡುವ ಬಗ್ಗೆ ದಿನಾಂಕ:13.4.2007, 19.4.2007 ರಂದು 5.5.2007, 18.5.2007, 29.5.2007,12.6.2007 ರಂದು ಹಾಜರಾಗಲು ಸೂಚಿಸಲಾಗಿತ್ತು. ಸದರಿ ದಿನಗಳಲ್ಲಿ ವಾಹನದ ಮಾಲೀಕರು ಸೂಕ್ತ ಹಾಗೂ ಸಮಂಜಸವಾದ ಕಾರಣಗಳನ್ನು ನೀಡಲು ಅಸಮರ್ಥರಾಗಿರುವುದು ಕಂಡು ಬಂದಿದೆ ಮತ್ತು ಪೂರ್ಣವಾಗಿ ಗೊಂದಲಕ್ಕೆ ಉಂಟಾಗಿರುತ್ತಾರೆ ಅವರು ಈ ಹಿಂದೆ ನೇಮಕಗೊಂಡ ವಕೀಲರು ಮಾಡಿರುವ ಕೋರಿಕೆಯು ಮತ್ತು ವಾಹನದ ಮಾಲೀಕರು ಮಾಡಿರುವ ಕೋರಿಕೆಯು ಬಹಳ ವ್ಯತ್ಯಾಸ ಕಂಡು ಬಂದಿದ್ದು, ವಾಹನದ ಮಾಲೀಕರು ಪ್ರಕರಣವನ್ನು ಇತ್ಯರ್ಥಪಡಿಸಲು ಆಸಕ್ತಿ ತೋರದೇ ಪ್ರ'ಕರಣವನ್ನು ವರ್ಷಗಟ್ಟಲೆ ಮುಂದೂಡಿ ಸಮಯವನ್ನು ಹಾಳು ಮಾಡುವ ತಂತ್ರಗಳನ್ನು ಉಪಯೋಗಿಸಿರುವುದು ಕಂಡು ಬಂದಿದೆ. ಮತ್ತು ವಾಹನದ ಮಾಲೀಕರು ಅಬಕಾರಿ ಕಾನೂನಿನ ಅರಿವಿದ್ದೆ ಈ ಕೃತ್ಯದಲ್ಲಿ ಬಾಗಿಯಾಗಿರುವುದು ಈ ನ್ಯಾಯಾಲಯದಲ್ಲಿ ಮನವರಿಕೆಯಾಗಿರುವುದರಿಂದ ಮತ್ತು ವಾಹನ ವಶಪಡಿಸಿಕೊಳ್ಳಲಾದ ದಿನದಿಂದ ಇಂದಿನವರೆಗೆ ಅಂದರೆ ಸುಮಾರು 3 ವರ್ಷಗಳು ಕಳೆದಿದ್ದು ಚಾಲನೆಯ ಸ್ಥಿತಿಯಿಲ್ಲದೆ ಕಛೇರಿಯಲ್ಲಿ ನಿಲ್ಲಿಸಲಾಗಿದ್ದು, ಸದರಿ ವಾಹನವು ಕೊಡಗು ಜಿಲ್ಲೆಯ ವಿಶೇಷ ಹವಾಮಾನದ ವೈಪರೀತ್ಯಕ್ಕೆ ಒಳಗಾಗಿ ಅದರ ಬಿಡಿ ಭಾಗಗಳು ತುಕ್ಕು ಹಿಡಿದು ತೀರಾ ಹದಗೆಟ್ಟ ಸ್ಥಿತಿ ಉಂಟಾಗುವುದರಿಂದ ಹಾಗೂ ಇದರಿಂದ ಆರ್ಥಿಕ ನಷ್ಟ ಉಂಟಾಗಿರುವುದರಿಂದ ಜಪ್ತು ಪಡಿಸಲಾದ ವಸ್ತುಗಳ ಶೀಘ್ರ ವಿಲೇವಾರಿಯ ದೃಷ್ಟಿಯಿಂದ ಪ್ರಕರಣ ಮುಂದುವರೆಸುವುದು ಸೂಕ್ತವಲ್ಲವೆಂದು ನಿರ್ಣಯಿಸಿ ಈ ಕೆಳಕಂಡ ಆದೇಶ.

**ಆದೇಶ**

ಹೆಚ್.ಎನ್. ಆನಂದ್, ಅಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಕಾಯ್ದೆ 1965 ರ ಕಲಂ 43(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ಉಪ ನಿರೀಕ್ಷಕರು, ಉಪವಿಭಾಗ ಮಡಿಕೇರಿ ಇವರ ಮೊಕದ್ದಮೆ ನಂ:30:2003–04 ದಿನಾಂಕ:13.3.2004 ರಂದು ಜಪ್ತು ಮಾಡಲಾದ ಮೋಟಾರ್ ಯಜ್ಡಿ ಬೈಕ್ ನಂ.ಕೆ.ಎ.–12–ಇ–3037

ರನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 (ಎ) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಈ ಆದೇಶ ಅಂದರೆ ದಿನಾಂಕ:12.6.2007 ರಂದು ಬೆರಳಚ್ಚು ಮಾಡಿಸಿ ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು
ಪಿ.ಆರ್. 793 ಇಐಬಿ, ಕೊಡಗು ಜಿಲ್ಲೆ, ಮಡಿಕೇರಿ

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ,**
**ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–18**
**ದಾವಾ ಅರ್ಜಿ ಸಂಖ್ಯೆ:ಜೆಆರ್‌ಬಿ:ಡಿಐಎಸ್:208:2007–08**

| **ವಾದಿ:** | **ಪ್ರತಿವಾದಿಗಳು** |
|---|---|
| ಶ್ರೀಮತಿ ಇಂದಿರಮ್ಮ, ಕೋಂ ಡಿ.ಪಿ.ಕೆ. ಆಚಾರ್, ನಂ.1131, 18ನೇ ಕ್ರಾಸ್,24ನೇ ಮೈನ್, ಬನಶಂಕರಿ 2ನೇ ಹಂತ, ಬೆಂಗಳೂರು–70. | 1. ಕಾರ್ಯದರ್ಶಿ, ಮನೋನ್ಮಯಿ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ 275/2, 9ನೇಬಿ ಮೈನ್ 50 ಅಡಿ ರಸ್ತೆ, ಹನುಮಂತನಗರ, ಬೆಂಗಳೂರು–19<br>2. ಶ್ರೀ ಶಿವಲಿಂಗಯ್ಯ, ಅಧ್ಯಕ್ಷರು, ಮನೋನ್ಮಯಿ ಕ್ರೆಡಿಟ್ ಕೋ–ಆಪರೇಟರ್ ಸೊಸೈಟಿ ಲಿ., ನಂ. 275/2 9ನೇ ಬಿ ಮೈನ್ 50 ಅಡಿ ರಸ್ತೆ, ಹನುಮಂತನಗರ, ಬೆಂಗಳೂರು–19<br>3. ಶ್ರೀ ಕೆ. ಗುರುರಾಜ್, ನಂ. 40, 12ನೇ ಕ್ರಾಸ್, 12ನೇ ಮೈನ್ ರಾಘವೇಂದ್ರ ಲೇಔಟ್, ಕಾಳಿದಾಸ ಲೇಔಟ್ ಹತ್ತಿರ, ಶ್ರೀನಗರ, ಬೆಂಗಳೂರು–50. |

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ಪ್ರಕಾರ ಸ್ಥಿರಾಸ್ತಿಯನ್ನು ಆಟ್ಯಾಚ್ ಮಾಡಿರುವ ಬಗ್ಗೆ ನೋಟೀಸು.**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ. 7.80,000–00 ಗಳನ್ನು ಠೇವಣಿ ಹೂಡಿದ ದಿನಾಂಕದಿಂದ ಶೇಕಡಾ 18 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯು ದಾವಾ ಅರ್ಜಿಯನ್ನು ಮೇಲ್ಕಂಡ ಸಂಖ್ಯೆಯಲ್ಲಿ ನೋಂದಾಯಿಸಿಕೊಂಡು ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2. ವಾದಿಯು ಅವರ ಅರ್ಜಿಯ ಜೊತೆ 1939ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳು 1,2 ಮತ್ತು 3 ಇವರುಗಳ ಹೆಸರಿನಲ್ಲಿ ಈ ಕೆಳಗಿನ ಷೆಡ್ಯೂಲ್ ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ಮಾಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಸದರಿ 'ಎ' ಮತ್ತು 'ಬಿ' ಷೆಡ್ಯೂಲ್ ಆಸ್ತಿಗಳನ್ನು ಸಂಘದ ಹಣದಿಂದ ಹೊಂದಿರುವುದಾಗಿ ತಿಳಿಸು ಬಂದಿರುತ್ತದೆ .ಎ ಷೆಡ್ಯೂಲ್‌ನಲ್ಲಿ ತೋರಿಸಿರುವ ಚರಾಸ್ತಿಯಾದ ನಿಶ್ಚಿತ ಠೇವಣಿ ಮತ್ತು ಚಾಲ್ತಿ ಖಾತೆಯ ಹಣವನ್ನು ಸರ್ ಎಂ. ವಿಶ್ವೇಶ್ವರಯ್ಯ ಕೋ–ಆಪರೇಟಿವ್ ಬ್ಯಾಂಕಿನಲ್ಲಿ ಹೊಂದಿರುವುದಾಗಿ ಹಾಗೂ ಬಿ ಷೆಡ್ಯೂಲ್‌ನಲ್ಲಿ ತೋರಿಸಿರುವ ಸ್ಥಿರಾಸ್ತಿಯಾದ ಕಟ್ಟಡವು ಕಾಳಿದಾಸ ಲೇಔಟ್‌ನಲ್ಲಿದ್ದು, ಈ ಸ್ಥಿರಾಸ್ತಿಯನ್ನು ಕೊಳ್ಳಲು ಮನೋನ್ಮಯಿ ಸಹಕಾರ ಸಂಘದ ಹಣವನ್ನು ಉಪಯೋಗಿಸಿರುವುದು ಅರ್ಜಿದಾರರ ಪ್ರಮಾಣಪತ್ರದಿಂದ ಕಂಡುಬಂದಿರುತ್ತದೆ. ಇದಲ್ಲದೆ, ಈ ಸದರಿ ಆಸ್ತಿಯ ಮಾಲೀಕರಾದ ಶ್ರೀ ರಾಘವೇಂದ್ರರಾವ್ ಇದೇ ಆಸ್ತಿಯ ಮೇಲೆ ಆಧಾರವಾಗಿಟ್ಟು ಸೊಸೈಟಿಯಿಂದ ಸಾಲ ಪಡೆದುಕೊಂಡಿರುವುದು ಈ ಪ್ರಮಾಣಪತ್ರದಿಂದ ತಿಳಿದುಬಂದಿರುತ್ತದೆ. ಆದುದರಿಂದ ಈ ಬಿ ಷೆಡ್ಯೂಲ್ ಆಸ್ತಿ ಕೂಡ ಮೊದಲ ಪ್ರತಿವಾದಿ ಹೆಸರಿನಲ್ಲಿ ಮಾರಾಟದ ಒಪ್ಪಂದದ ಕರಾರು ಆಗಿರುವುದು ತಿಳಿದುಬಂದಿರುತ್ತದೆ. 3ನೇ ಪ್ರತಿವಾದಿಯವರ ಪತ್ನಿಯ ಹೆಸರಿನಲ್ಲಿರುವ ಕೆಳಕಂಡ ಎ ಮತ್ತು ಬಿ ಸ್ವತ್ತುಗಳನ್ನು ಪರಭಾರೆ ಮಾಡಲು ಉದ್ದೇಶೀಸಿದ್ದು, ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಡಿಕ್ರಿ ನೀಡಿದರೂ ಸದರಿ ಅವಾರ್ಡ್/ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗುಗಳನ್ನು ವಸೂಲು ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ವಾದಿಯವರು ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ಕಲಂ 103 ರ ರೀತ್ಯಾ ಸಲ್ಲಿಸಿರುವ ಅರ್ಜಿಗಳನ್ನು ಮತ್ತು ದಾಖಲಾತಿಗಳನ್ನು ಕೂಲಂಕಶವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103 ರ ಅರ್ಜಿಯಲ್ಲಿ ತಿಳಿಸಿರುವ ವಿಷಯಗಳು ಮೇಲ್ನೋಟಕ್ಕೆ ನಿಜವೆಂದು ಕಂಡುಬಂದಿರುತ್ತದೆ. ಅಲ್ಲದೆ ಪ್ರತಿವಾದಿಗಳ ಈ ಕೆಳಗಿನ ಷೆಡ್ಯೂಲ್‌ಗಳಲ್ಲಿ ಕಾಣಿಸಿರುವ ಎ ಮತ್ತು ಬಿ ಸ್ವತ್ತುಗಳನ್ನು ಮಾರಾಟ ಮಾಡದಂತೆ ತಡೆಯದಿದ್ದಲ್ಲಿ ವಾದಿ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

ಈ ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂ.ಡಬ್ಲ್ಯೂ:69:ಸಿಎಲ್ಎಂ: 2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಿ.ಕೆ. ಯದುನಾಥ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಪ್ರತಿವಾದಿಗಳಾದ 1,2 ಮತ್ತು 3 ರವರುಗಳ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ಗಳಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ, 7.80.000–00 ಗಳನ್ನು ಬಡ್ಡಿ ಸಹಿತ ಈ ನ್ಯಾಯಾಲಯದ ಬಿ.ಡಿ. ಅಂಡ್ ಬಿ.ಆರ್.ಡಿ.ಸಿ.ಸಿ ,ಬ್ಯಾಂಕ್, ಬೆಂಗಳೂರಿನಲ್ಲಿ ಅಮಾನತ್ ಖಾತೆಯಲ್ಲಿ ಈ ಆದೇಶದಿಂದ 45 ದಿನಗಳು ಅಥವಾ ಅದಕ್ಕಿಂತ ಮುಂಚಿತವಾಗಿ ಜಮಾ ಮಾಡಿ ಅಧಿಕೃತ ಚಲನ್/ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ 1ನೇ ಪ್ರತಿವಾದಿಯು ಮೇಲೆ ತಿಳಸಿದಂತೆ ನಿಗಧಿತ ದಿನಗಳೊಳಗೆ ನಗದು ಭದ್ರತೆಯನ್ನು ನೀಡಲು ವಿಫರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರಿಕರಿಸಲಾಗುವುದು. ಈ ಕೆಳಗಿನ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಸ್ಥಿರಾಸ್ತಿಗಳನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**1ನೇ ಪ್ರತಿವಾದಿಯ ಹೆಸರಿಗೆ ಸೇರಿದ ಷೆಡ್ಯೂಲ್ 'ಎ' ವಿವರ**

ಸರ್. ಎಂ. ವಿಶ್ವೇಶ್ವರಯ್ಯ ಕೋ–ಆಪರೇಟಿವ್ ಬ್ಯಾಂಕ್ ಲಿ., ನಂ 109 ಶಂಕರಮಠ ರಸ್ತೆ, ಶಂಕರಪುರಂ, ಬೆಂಗಳೂರು–4 ಇದರಲ್ಲಿ ಹೊಂದಿರುವ ಚಾಲ್ತಿ ಖಾತೆ ಸಂಖ್ಯೆ 1792 ಮೊತ್ತ ರೂ 50,000–00 (ಐವತ್ತು ಸಾವಿರ ರೂಪಾಯಿಗಳು) ಮತ್ತು ನಿಶ್ಚಿತ ಠೇವಣಿ ಸಂಖ್ಯೆ 1936 ಮತ್ತು 4937 ರ ಮೊತ್ತ ರೂ. 2,00,000–00 (ಎರಡು ಲಕ್ಷ ರೂಪಾಯಿಗಳು)

**3ನೇ ಪ್ರತಿವಾದಿಯ ಪತ್ನಿಯ ಹೆಸರಿಗೆ ಸೇರಿದ ಷೆಡ್ಯೂಲ್ 'ಬಿ' ಸ್ಥಿರಾಸ್ತಿಗಳ ವಿವರ**

ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು ಕೊತ್ತಗೆರೆ ಹೋಬಳಿ ರಾಯಗೊನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ 52 ಎಫ್ (ಪಿ.ಪಿ. 12 ಮತ್ತು 52 ಹೆಚ್ (ಪಿ.ಪಿ.14)ರಲ್ಲಿ ಇರತಕ್ಕ 8 ಎಕರೆ ಖುಷ್ಕಿ ಜಮೀನಿಗೆ ಚಕ್ಕುಬಂದಿ

ಪೂರ್ವಕ್ಕೆ :ಕೆ.ಎಸ್. ಪ್ರಭಾಕರ್ ರವರ ಜಮೀನು

ಪಶ್ಚಿಮಕ್ಕೆ :ಇದೇ ಸರ್ವೆ ನಂಬರಿನಲ್ಲಿ ಶ್ರೀ ತಿರುಮಲ್ಲೇಶ್ ರವರಿಗೆ ಕ್ರಯ ಮಾಡಿರುವ ಆಸ್ತಿ

ಉತ್ತರಕ್ಕೆ : ಕೆ.ಎಸ್. ಮಂಜುನಾಥ್ ರವರ ಆಸ್ತಿ

ದಕ್ಷಿಣಕ್ಕೆ : ರಂಗಸ್ವಾಮಿ ಗುಡ್ಡ ಕಾವಲ್

ಒಟ್ಟು ವಿಸ್ತೀರ್ಣ 2 ಎಕರೆ ಭೂಮಿ

**ಷೆಡ್ಯೂಲ್ 'ಬಿ 1' ಸ್ಥಿರಾಸ್ತಿಗಳ ವಿವರ**

ಪೂರ್ವಕ್ಕೆ : ವೆಂಕಟಯ್ಯ ಮತ್ತು ಬೋರಯ್ಯ ರವರ ಜಮೀನು

ಪಶ್ಚಿಮಕ್ಕೆ : ತಿರುಮಲೇಶ್ ರವರ ಸ್ವತ್ತು

ಉತ್ತರಕ್ಕೆ : ಗೌರ್ನಮೆಂಟ್ ಕ್ವೆರಿ ಲ್ಯಾಂಡ್

ದಕ್ಷಿಣಕ್ಕೆ : ರಂಗಸ್ವಾಮಿ ಗುಡ್ಡ ಕಾವಲ್.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:12.6.2007 ರಂದು ನೀಡಿರುತ್ತೇನೆ.

**ಬಿ.ಕೆ. ಯದುನಾಥ್**
ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್. 784

ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ನ್ಯಾಯಾಲಯದಲ್ಲಿ

**ಫಿರ್ಯಾಧಿದಾರರು:** ಶ್ರೀ ಹೆಚ್.ಎಫ್. ಕುಪ್ಪಲೂರು,
ಅಬಕಾರಿ ನಿರೀಕ್ಷಕರು ದಾವಣಗೆರೆ ಉಪ ವಿಭಾಗ

**ಪ್ರತಿನಿಧಿಸುವವರು:** ಸಹಾಯಕ ಅಭಿಯೋಗ ನಿರ್ದೇಶಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ವಿರುದ್ಧ:**

**ಆರೋಪಿತರು:** ಶ್ರೀ ಮಹಮ್ಮದ್ ಇಬ್ರಾಹಿಂ ಬಿನ್ ಮಹಮ್ಮದ್ ಯೂಸುಫ್,
16 ನೇ ವಾರ್ಡ್, ಕೋಟೆ ಹೊಸಪೇಟೆ ಬಳ್ಳಾರಿ ಜಿಲ್ಲೆ.

**ಪ್ರತಿನಿಧಿಸುವವರು:** ಶ್ರೀ ಆರ್.ಬಿ. ಕಂಟ್ರಾಕ್ಟರ್,
ವಕೀಲರು, ದಾವಣಗೆರೆ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:21.3.1998 ರಂದು ಜಗಳೂರು ತಾಲ್ಲೂಕು, ದೊಣ್ಣಿಹಳ್ಳಿ, ಕ್ರಾಸ್ ರಾಷ್ಟ್ರೀಯ ಹೆದ್ದಾರಿ 13 ರಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗುತ್ತಿದೆ ಎಂಬ ಭಾತ್ಮಿಯ ಮೇರೆಗೆ ಪಂಚಕರನ್ನು ಬರಮಾಡಿಕೊಂಡು ರಸ್ತೆ ಕಾವಲು ಕಾಯುತ್ತಿದ್ದಾಗ ಸಾಯಂಕಾಲ ಸುಮಾರು 5.00 ಗಂಟೆಗೆ ಹೊಸಪೇಟೆ ಕಡೆಯಿಂದ ಬೆಂಗಳೂರು ಕಡೆಗೆ ಒಂದು ಟ್ಯಾಂಕರ್ ಹೋಗುತ್ತಿದ್ದು, ಅದನ್ನು ತಡೆದು ನಿಲ್ಲಿಸಿ ಅದರಲ್ಲಿ ಏನಿದೆ ಎಂದು ವಾಹನ ಚಾಲಕರನ್ನು ವಿಚಾರಿಸಲಾಗಿ ಮದ್ಯಸಾರವಿದೆ ಎಂದು ಹೇಳಿದ್ದು, ವಾಹನ ಚಾಲಕರನ್ನು ಮದ್ಯಸಾರ ಸಾಗಾಣಿಕೆ ಸಂಬಂದಿಸಿದಂತೆ ಪರ್ಮಿಟ್ ವಗ್ಯೆರೆ ಇದೆಯೇ ಎಂದು ವಿಚಾರಿಸಲಾಗಿ ಅವನು ಕೆಲವು ದಾಖಲಾತಿಗಳನ್ನು ನೀಡಿದನು. ಈ ದಾಖಲಾತಿಗಳನ್ನು ಪರಿಶೀಲಿಸಲಾಗಿ ಅವನು ನೀಡಿದ ದಾಖಲಾತಿಗಳು ಟ್ಯಾಂಕರ್ ನಲ್ಲಿರುವ ಮದ್ಯಸಾರಕ್ಕೆ ಸಂಬಂಧಿಸಿದ ದಾಖಲಾತಿಗಳಲ್ಲವೆಂದು ತಿಳಿದು ಬಂದಿರುತ್ತದೆ. ನಂತರ ಟ್ಯಾಂಕರ್ ಚಾಲಕನ ಹೆಸರನ್ನು ಕೇಳಲಾಗಿ ಶಂಕರ್ ಬಿನ್ ಬಸಣ್ಣ ನಾಗೇನಹಳ್ಳಿ, ಹೊಸಪೇಟೆ ತಾಲ್ಲೂಕು ಎಂದು ತಿಳಿಸಿರುತ್ತಾರೆ. ಟ್ಯಾಂಕರ್‌ನ್ನು ಪರಿಶೀಲಿಸಲಾಗಿ ಅದು ಅಶೋಕ ಲೈಲ್ಯಾಂಡ್ ಕಂಪನಿಗೆ ಸೇರಿದ್ದು ನೋಂದಣಿ ಸಂಖ್ಯೆ:ಕೆಎ 25–1987 ಆಗಿದ್ದು, ಟ್ಯಾಂಕರ್ ನಲ್ಲಿ ನಾಲ್ಕು ಭಾಗಗಳಿದ್ದು, ಒಟ್ಟು 11.000 ಲೀಟರ್ ಮದ್ಯಸಾರದ ವಾಸನೆಯಿಂದ ಕೂಡಿದ ಸ್ಪಿರೀಟ್ ಇದ್ದು, ಪ್ರತಿ ಭಾಗದಿಂದ 750 ಮಿಲಿಯ 2 ಬಾಟಲಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಮಾದರಿಯನ್ನು ತೆಗೆದು ಪಂಚರ ಸಹಿ ಪಡೆದು ಸೀಲು ಮಾಡಿ ಪಂಚರ ಸಮಕ್ಷಮ ಎಲ್ಲಾ ದಾಖಲಾತಿಗಳನ್ನು ವಶಕ್ಕೆ ತೆಗೆದುಕೊಂಡಿರುತ್ತಾರೆ. ಈ ಬಗ್ಗೆ ಫಿರ್ಯಾಧಿಯು ಗುನ್ನೆ ಸಂ:ಧಾ.ಉ.ವಿ:ಅನಿ:ಪ್ರ:ವ.ಸಂ:44:97–98, ದಿ:21.3.98 ರನ್ವಯ ಪ್ರಕರಣ ದಾಖಲಿಸಿ, ಈ ಪ್ರಾಧಿಕಾರಕ್ಕೆ ಪ್ರಥಮ ವರ್ತಮಾನ ವರದಿ, ಸ್ವತ್ತಿನ ಪಟ್ಟಿ ಮತ್ತು ಜಲ್ತಿ ಪಂಚನಾಮೆಯನ್ನು ಸಲ್ಲಿಸಿರುತ್ತಾರೆ.

ಈ ಪ್ರಾಧಿಕಾರಕ್ಕೆ ಸಲ್ಲಿಸಿದ ದಾಖಲಾತಿಗಳನ್ನು ಪರಿಶೀಲಿಸಲಾಗಿ ವಾಹನವು ಮಹಮ್ಮದ್ ಇಬ್ರಾಹಿಂ ಬಿನ್ ಮಹಮ್ಮದ್ ಯೂಸುಫ್ 18ನೇ ವಾರ್ಡ್, ಹೊಸಪೇಟೆ ಇವರ ಹೆಸರಿನಲ್ಲಿ ಇರುವುದಾಗಿ ತಿಳಿದು ಬಂದಿರುತ್ತದೆ.

ದಿನಾಂಕ:2.4.1998ರ ಪತ್ರದಲ್ಲಿ ಪಡೆದ ರಾಸಾಯನಿಕ ತಜ್ಞರ ವರದಿಯನ್ನು ಪರಿಶೀಲಿಸಲಾಗಿ ಜಪ್ತಿ ಮಾಡಿದ ದ್ರವದಲ್ಲಿ ಮದ್ಯದ ಇರುವಿಕೆಯಿರುವುದು ಹಾಗೂ ಬಳಕೆಗೆ ಯೋಗ್ಯವಾಗಿರುವುದಾಗಿ ದೃಢಪಟ್ಟಿರುತ್ತದೆ.

ಈ ಪ್ರಾಧಿಕಾರವು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಬಿ)ಯ ಅಡಿಯಲ್ಲಿ ವಾಃನದ ಮಾಲೀಕರಿಗೆ ಕಾರಣ ಕೇಳುವ ನೋಟಿಸನ್ನು ನೀಡಿ ದಿ:24.3.1998 ರಲ್ಲಿ ನೀಡಲಾಗಿತ್ತು. ವಾಹನದ ಮಾಲೀಕರಾದ ಶ್ರೀ ಮೊಹಮ್ಮದ್ ಇಬ್ರಾಹಿಂ ಬಿನ್ ಮೊಹಮ್ಮದ್ ಯೂಸುಫ್ ಇವರ ಪರ ಜಿ.ಪಿ.ಎ. ಹೋಲ್ಡರ್‌ರಾದ ಶ್ರೀ ದ್ವಾರಕೀ ಬಿನ್ ದಿನಕರ್ ನಂ. 303, 7ನೇ ಮೇನ್ ಲಕ್ಕಸಂದ್ರ, ಬೆಂಗಳೂರು–30 ಇವರು ಈ ಪ್ರಾಧಿಕಾರಕ್ಕೆ ಶ್ರೀ ಆರ್.ಬಿ. ಕಂಟ್ರಾಕ್ಟರ್, ವಕೀಲರು, ದಾವಣಗೆರೆ, ಇವರ ಮೂಲಕ ಅರ್ಜಿ ಸಲ್ಲಿಸಿ ಜಪ್ತಿ ಮಾಡಿದ ವಾಹನವನ್ನು ಮಧ್ಯಂತರ ಆದೇಶದ ಮೇರೆಗೆ ಬಿಡುಗಡೆಗೊಳಿಸಲು ಕೋರಿರುತ್ತಾರೆ. ಅವರ ಅರ್ಜಿಯನ್ನು ಪರಿಶೀಲಿಸಿದ ಈ ಪ್ರಾದಿಕಾರವು 75,000–00 ರೂ.ಗಳ ಬ್ಯಾಂಕ್ ಗ್ಯಾರಂಟಿಯನ್ನು ಷೆಡ್ಯೂಲ್ ಬ್ಯಾಂಕಿನಿಂದ ಪಡೆದು ಸಲ್ಲಿಸಲು ಹಾಗೂ 25,000–00 ರೂ.ಗಳ ಜಾಮೀನು ಮತ್ತು 3,00,000–00 ರೂ.ಗಳ ನಷ್ಟಭರ್ತಿ ಪತ್ರವನ್ನು ಸಲ್ಲಿಸಿದಲ್ಲಿ ವಾಹನವನ್ನು ಬಿಡುಗಡೆಗೊಳಿಸುವುದಾಗಿ ಈ ಷರತ್ತುಗಳನ್ನು ಪೂರೈಸಲು ತಿಳಿಸಿ ಈ ಪ್ರಾಧಿಕಾರವು ದಿನಾಂಕ:13.4.1998 ರಂದು ಆದೇಶ ನೀಡಲಾಗಿತ್ತು. ಅರ್ಜಿದಾರರು ಈ ಪ್ರಾಧಿಕಾರದ ಷರತ್ತುಗಳಂತೆ 75,000–00 ರೂ. ಮೊತ್ತದ ಬ್ಯಾಂಕ್ ಗ್ಯಾರೆಂಟಿಯನ್ನು ಬ್ಯಾಂಕ್ ಆಫ್ ಮಹಾರಾಷ್ಟ್ರ, ದಾವಣಗೆರೆ ಶಾಖೆಯಿಂದ ಪಡೆದು ಸಲ್ಲಿಸಿದ್ದುದರಿಂದ ಇತರ ಷರತ್ತುಗಳನ್ನು ಪೂರೈಸಿದ್ದುದರಿಂದ ವಾಹನವನ್ನು ತಾತ್ಕಾಲಿಕವಾಗಿ ಮಾಲೀಕರ ವಶಕ್ಕೆ ಕೆಲವು ಷರತ್ತುಗಳನ್ನು ವಿಧಿಸಿ ಬಿಡುಗಡೆಗೊಳಿಸಲಾಯಿತು.

ಪ್ರಕರಣದ ಸಾಕ್ಷಿ ವಿಚಾರಣೆ ಕುರಿತು ದಾಖಲಾತಿಗಳು ದೃಢಿಕೃತ ನಕಲುಗಳನ್ನು ಪಡೆದು ಕೊಂಡು ವಿಚಾರಣೆಯನ್ನು ಗೊತ್ತುಪಡಿಸಿ ಈ ಪ್ರಕರಣದ ಫಿರ್ಯಾಧಿದಾರರಿಗೆ ತನಿಖಾಧಿಕಾರಿ ಪಂಚರು ಹಾಗೂ ವಾಹನದ ಮಾಲೀಕರಿಗೆ ನೋಟಿಸುಗಳನ್ನು ನೀಡಲಾಗಿರುತ್ತದೆ.

ಪ್ರಕರಣದಲ್ಲಿ ಲಭ್ಯವಿರುವ ದಾಖಲಾತಿಗಳು, ಸಾಕ್ಷಿ ವಿಚಾರಣೆಗಳನ್ನು ಪುರಾವೆಗೆ ಹಾಗೂ ಗಣನೆಗೆ ತೆಗೆದುಕೊಂಡು ಮತ್ತು ಪ್ರಕರಣದ ಸಂಪೂರ್ಣ ವಿದ್ಯಮಾನವನ್ನು ಗಮನಿಸಿದಾಗ ಈ ಪ್ರಕರಣದಲ್ಲಿನ ಪಂಚ ಸಾಕ್ಷಿದಾರರಾದ ಶ್ರೀ ರಾಮಣ್ಣ ಬಿನ್ ಹನುಮಂತಪ್ಪ ಮತ್ತು ರಾಜು ಬಿನ್ ಪರಮೇಶ್ವರಪ್ಪ, ಇವರು ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ.

ಈ ಪ್ರಕರಣದಲ್ಲಿ ಅರ್ಜಿದಾರರ ಪರ ವಕೀಲರು ಹಾಗೂ ಸಹಾಯಕ ಅಭಿಯೋಜಕ ನಿರ್ದೇಶಕರ ವಾದ–ವಿವಾದವನ್ನು ಆಲಿಸಿದ್ದು, ವಾಹನವನ್ನು ಮುಟ್ಟುಗೋಲು ಕ್ರಮ ಕೈಗೊಳ್ಳುವ ಮುನ್ನ ಈ ಕೆಳಕಂಡ ವಿವಾದಾಂಶಗಳಿಗೆ ಉತ್ತರ ಪಡೆಯುವುದು ಅತಿ ಅವಶ್ಯವಿರುತ್ತದೆ.

1. ವಾಹನ ಸಂಖ್ಯೆ :ಕೆಎ 25 1987 ರಲ್ಲಿ ಸಾಗಾಣಿಕೆಯಾಗುತ್ತಿದ್ದ ವಸ್ತು ಅಬಕಾರಿ ವಸ್ತುವಾಗಿದೆಯೇ ಹೇಗೆ?

2. ಪ್ರಕರಣದಲ್ಲಿ ಜಪ್ತಿ ಮಾಡಿದ ವಾಹನ ಸಂಖ್ಯೆ: ಕೆಎ 25 1987ನ್ನು ಅಬಕಾರಿ ಕಾಯ್ದೆ ಕಲಂಗಳ ಉಲ್ಲಂಘನೆಗಾಗಿ ಬಳಸಿರುವುದು ಸಾಬೀತಾಗಿದೆಯೇ ಹೇಗೆ?

3. ವಾಹನದ ಮಾಲೀಕರು ವಾಹನವನ್ನು ಅಬಕಾರಿ ಕಾಯ್ದೆ ಉಲ್ಲಂಘನೆಗಾಗಿ ಉಪಯೋಗಿಸಬಾರದೆಂಬ ಬಗ್ಗೆ ಮುಂಜಾಗ್ರತೆ ಕ್ರಮ ತೆಗೆದುಕೊಂಡಿದ್ದಾರೆಯೇ ಹೇಗೆ?

4. ಜಪ್ತಾದ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೇ ಹೇಗೆ?

**1. ನೇ ವಿವಾದಾಂಶಕ್ಕೆ ಉತ್ತರ:**

ಫಿರ್ಯಾಧಿದಾರರಾದ ಶ್ರೀ ಹೆಚ್.ಎಫ್. ಕುಪ್ಪೇಲೂರ, ಇವರು ಜಪ್ತಿ ಮಾಡಿದ ವಾಹನದಲ್ಲಿನ ಮದ್ಯಸಾರವನ್ನು ಮಾದರಿಗಾಗಿ ತೆಗೆದುಕೊಂಡ ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗೆ ಕಳೂಹಿಸಿದ್ದು, ಮುಖ್ಯ ರಾಸಾಯನಿಕ ತಜ್ಞರ ಕೇಂದ್ರ ರಾಸಾಯನಿಕ ಪ್ರಯೋಗಾಲಯ ಅಬಕಾರಿ ಇಲಾಖೆ, ಬೆಂಗಳೂರು, ಇವರು ದಿನಾಂಕ:2.4.1998ರ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ನೀಡಿದ್ದು ಈ ವರದಿಯನ್ನು ಫಿರ್ಯಾಧಿದಾರರು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿದ್ದರು. ವಿಚಾರಣಾ ಸಮಯದಲ್ಲಿ ಈ ವರದಿಯನ್ನು ಗುರುತಿಸಿರುತ್ತಾರೆ. ಅರ್ಜಿದಾರರ ಪರ ವಕೀಲರು ಫಿರ್ಯಾಧಿದಾರರ ಸಾಕ್ಷಿ ವಿಚಾರಣೆ ಸಮಯದಲ್ಲಿ ಹಾಜರಿದ್ದು, ಪಾಟಿ ಸವಾಲು ಮಾಡಿರುತ್ತಾರೆ. ಅದರೆ, ಜಪ್ತಿಮಾಡಿದ ವಾಹನದಲ್ಲಿ ಇದ್ದ ವಸ್ತು ಮದ್ಯಸಾರ ಅಲ್ಲವೆಂದು ವಾದಿಸಿರುವುದಿಲ್ಲ. ರಾಸಾಯನಿಕ ತಜ್ಞರ ವರದಿಯ ಪ್ರಕಾರ ಪ್ರಕರಣದಲ್ಲಿನ ಮಾದರಿ ಬಾಟಲಿಗಳಲ್ಲಿ ಈಥೇಲ್, ಆಲ್ಕೋಹಾಲ್ ಅಂಶವಿದ್ದು, ಇದು ಬಳಕೆಗೆ ಯೋಗ್ಯವಾಗಿದೆಯಾಗಿ ಧೃಢೀಕರಿಸಿರುತ್ತಾರೆ. ಈ ಎಲ್ಲಾ ಹಿನ್ನಲೆಯಲ್ಲಿ ಜಪ್ತಾದ ವಾಹನ ಕೆಎ 25 1987 ರಲ್ಲಿ ಸಾಗಾಣಿಕೆ ಮಾಡುತ್ತಿದ್ದ ವಸ್ತು ಅಬಕಾರಿ ವಸ್ತು ಎಂದು ನಿಸ್ಸಂದೇಹವಾಗಿ ಧೃಢಪಟ್ಟಿರುತ್ತಾರೆ. ಅದ್ದರಿಂದ 1ನೇ ವಿವಾದಾಂಶಕ್ಕೆ ಉತ್ತರ ಹೌದು ಎಂದು ನಿರೂಪಿಸಿರುತ್ತೇವೆ.

**2ನೇ ವಿವಾದಾಂಶಕ್ಕೆ ಉತ್ತರ:**

2ನೇ ವಿವಾದಾಂಶಕ್ಕೆ ಉತ್ತರ ಕಂಡುಕೊಳ್ಳಲು ಫಿರ್ಯಾದುದಾರರು ಹಾಗೂ ಸಾಕ್ಷಿದಾರರ ಹೇಳಿಕೆಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಈ ಗುನ್ನೆಯ ಫಿರ್ಯಾಧುದಾರರು ದಿನಾಂಕ:23.10.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಈ ರೀತಿಯಾಗಿ ಸಾಕ್ಷಿ ನುಡಿದಿರುತ್ತಾರೆ. ದಿನಾಂಕ:21.3.1998 ರಂದು ರಾಷ್ಟ್ರೀಯ ಹೆದ್ದಾರಿ–13 ಜಗಳೂರು ತಾಲ್ಲೂಕಿನ ದೊಣ್ಣೆಹಳ್ಳಿ ಕ್ರಾಸ್ ಹತ್ತಿರ ಮದ್ಯಸಾರ ಅಕ್ರಮವಾಗಿ ಸಾಗಾಣಿಕೆಯಾಗುತ್ತಿದೆ ಎಂಬ ಭಾತ್ಮಿಯ ಮೇರೆಗೆ ಪಂಚರೊಂದಿಗೆ ರಸ್ತೆಕಾವಲು ಮಾಡುತ್ತಿದ್ದಾಗ ಸಂಜೆ ಸುಮಾರು 5.00 ಗಂಟೆ ಸುಮಾರಿಗೆ ಹೊಸಪೇಟೆ ಕಡೆಯಿಂದ ಬೆಂಗಳೂರು ಕಡೆಗೆ ಒಂದು ಟ್ಯಾಂಕರ್ ಹೋಗುತ್ತಿದ್ದುದನ್ನು ಕಂಡು ಅದನ್ನು ನಿಲ್ಲಿಸಿ ಟ್ಯಾಂಕರ್‌ನಲ್ಲಿ ಏನಿದೆ ಎಂದು ಡ್ರೈವರ್‌ನನ್ನು ವಿಚಾರಿಸಲಾಗಿ ಸ್ಪೀರಿಟ್ ಇದೆ ಎಂದು ತಿಳಿಸಿದನು. ಅದನ್ನು ಸಾಗಾಣಿಕೆ ಮಾಡಲು ಪರ್ಮಿಟ್ ಇದೆಯೇ ಎಂದು ಕೇಳಲಾಗಿ ಕೆಲವು ದಾಖಲಾತಿಗಳನ್ನು ನೀಡಿದ್ದು. ಆ ದಾಖಲಾತಿಗಳನ್ನು ಪರಿಶೀಲಿಸಲಾಗಿ ದಿನಾಂಕ: 9.3.1998 ರಂದು ಅಬಕಾರಿ ಉಪ ಆಯುಕ್ತರು ಮೈಸೂರು ಜಿಲ್ಲೆ, ಇವರು 11.000 ಲೀಟರ್ ಮದ್ಯಸಾರವನ್ನು ಮೆ. ಸಪ್ತಗಿರಿ ಎಂಟರ್ ಪ್ರೈಸಸ್ ಸಮೀರವಾಡಿ, ಬಿಜಾಪುರ ಜಿಲ್ಲೆ, ಇಲ್ಲಿಂದ ಮೆ. ಲಿನ್ ಕೆಮಿಕಲ್ ಇಂಡಸ್ಟ್ರೀಸ್ ಪ್ರೈ. ಲಿ. ಮೈಸೂರು ಇಲ್ಲಿಗೆ ಟ್ಯಾಂಕರ್ ನಂ. ಕೆಎ 25 1987 ನಲ್ಲಿ ಸಾಗಾಣಿಕೆ ಮಾಡಲು ರಹದಾರಿಯನ್ನು ನೀಡಿರುತ್ತಾರೆ. ದಿನಾಂಕ:16.3.1998 ರಂದು ಅಬಕಾರಿ ಅಧೀಕ್ಷಕರು. ಮೆ/ ಸಪ್ತಗಿರಿ ಎಂಟರ್ ಪ್ರೈಸಸ್, ಇವರು ಮದ್ಯಸಾರವನ್ನು ಸಾಗಾಣಿಕೆ ಮಾಡಲು ಹಿಂಬರಹ ನೀಡಿರುತ್ತಾರೆ. ಸದರಿ ರಹದಾರಿಗಳನ್ನು ಅಬಕಾರಿ ನಿರೀಕ್ಷಕರು, ತುಮಕೂರು ಉಪವಿಭಾಗ, ಇವರು ಪರಿಶೀಲಿಸಿ ರುಜುಮಾಡಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿ ದಾಖಲಾತಿಗಳು ಟ್ಯಾಂಕರ್‌ನಲಿದ್ದ ಮದ್ಯಸಾರ ಸಾಗಾಣಿಕೆ ಮಾಡುವುದಕ್ಕೆ ಸಂಬಂಧಿಸಿದ ದಾಖಲಾತಿಗಳಲ್ಲ ಎಂದು ತಿಳಿದು ಬಂದಿರುತ್ತದೆ. ಬ್ಯಾಂಕರ್ ಚಾಲಕನ ಹೆಸರು ಮತ್ತು ವಿಳಾಸ ಕೇಳಲಾಗಿ ಶಂಕರ್ ಬಿನ್ ಬಸಣ್ಣ, ನಾಗೇನಹಳ್ಳಿ., ಹೊಸಪೇಟೆ ತಾಲ್ಲೂಕು ಎಂದು ತಿಳಿಸಿರುತ್ತಾನೆ. ಟ್ಯಾಂಕರ್ ಅಶೋಕ ಲೈಲ್ಯಾಂಡ್ ಕಂಪನಿಗೆ ಸೇರಿದ್ದು, ಅದರ ನೊಂದಣಿ ಸಂಖ್ಯೆ:ಕೆಎ 25 1997 ಆಗಿದ್ದು ಟ್ಯಾಂಕರ್‌ನ್ನು ಪರಿಶೀಲಿಸಲಾಗಿ ಅದರಲ್ಲಿ ನಾಲ್ಕು ಕೋಣೆಗಳು ಇದ್ದು ಪ್ರತಿಯೊಂದು ಕೋಣೆಯಲ್ಲಿರುವ ಮದ್ಯಸಾರದಿಂದ 750 ಮಿಲಿಯ 2 ಬಾಟಲಿಗಳಲ್ಲಿ ಮದ್ಯಸಾರವನ್ನು ರಾಸಾಯನಿಕ ಪರೀಕ್ಷೆಗೆ ತೆಗೆದು ಗುರುತಿನ ಚೀಟಿಗೆ ಪಂಚರ ಸಹಿ ಪಡೆದು ಅವರ ಸಮಕ್ಷಮ ಸೀಲ್ ಮಾಡಲಾಗಿದೆಯಾಗಿ ಸಾಕ್ಷಿ ಹೇಳಿರುತ್ತಾರೆ. ರಹದಾರಿಯಿಲ್ಲದ ಮದ್ಯಸಾರ ಸಾಗಾಣಿಕೆ ಮಾಡಿರುವುದು ಅಬಕಾರಿ ಕಾಯ್ದೆ ಕಲಂಗಳ ಉಲ್ಲಂಘನೆಯಾಗಿದ್ದರಿಂದ ವಾಹನದೊಂದಿಗೆ ಮದ್ಯಸಾರವನ್ನು ಜಪ್ತಿ ಮಾಡಲಾಗಿದೆಯಾಗಿ ಹೇಳಿಕೆ ನೀಡಿರುತ್ತಾರೆ. ಬಾಟಲುಗಳಿಗೆ ಪಂಚರು ಸ್ಥಳದಲ್ಲಿಯೇ ಜಪ್ತಿ ಪಂಚನಾಮೆಯನ್ನು ತಯಾರಿಸಿ ಪಂಚರಿಗೆ ಓದಿ, ಹೇಳಿ ಅವರ ಸಹಿ ಪಡೆದಿರುತ್ತೇನೆ. ಪಂಚರ ಜಪ್ತಿ ಮಾಡಿದ ಮುದ್ದೆಮಾಲು ಹಾಗೂ ಆರೋಪಿಗಳೊಂದಿಗೆ ಕಛೇರಿಗೆ ಬಂದು ಈ ಬಗ್ಗೆ ಗುನ್ನೆ ಸಂಖ್ಯೆ:ದಾಉ9:ಆಇ:ಪ.ವ. 44:97–98ರಲ್ಲಿ ಗುನ್ನೆ ದಾಖಲಿಸಿ ಪ್ರಥಮ ವರ್ತಮಾನ ವರದಿ ಆರೋಪಿ, ರಿವೈಂಡ್ ಅರ್ಜಿ ಹಾಗೂ ಶೋಧನಾ ಪತ್ರ ಇವುಗಳೆಲ್ಲವನ್ನೂ ನ್ಯಾಯಾಲಯಕ್ಕೆ ಕಳುಹಿಸಿದನು. ಈ ಪ್ರಾಧಿಕಾರಕ್ಕೆ ಕೂಡ ಪ್ರಥಮ ವರ್ತಮಾನ ವರದಿ ಮತ್ತು ಪಿ.ಎಫ್‌ಗಳನ್ನು ಸಲ್ಲಿಸಿರುತ್ತೇನೆ. ಗುನ್ನೆ ಸ್ಥಳದಲ್ಲಿ ತಯಾರಿಸಿದ ಶೋಧನಾ ಫಿರ್ಯಾಧುದಾರರು ವಿಚಾರಣಾ ಸಮಯದಲ್ಲಿ ದಾಖಲಾತಿಗಳನ್ನು ಗುರುತಿಸಿದ್ದು. ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ.1 ಎಂದು, ಅದರಲ್ಲಿನ ಸಹಿಯನ್ನು ನಿಶಾನೆ ಪಿ.1(ಎ)ಎಂದು ಪಂಚನಾಮೆಯನ್ನು ನಿಶಾನೆ ಪಿ.2 ಹಾಗೂ ಅದರ ಮೇಲಿನ ಸಹಿಯನ್ನು ನಿಶಾನೆ ಪಿ.2 (ಎ) ಜಪ್ತಿ ಮಾಡಿದ ವಸ್ತುವಿನ ಪಟ್ಟಿಯನ್ನು ನಿಶಾನೆ ಪಿ.3

ಅದರಲ್ಲಿನ ಸಹಿಯನ್ನು ನಿಶಾನೆ ಪಿ.3 ಎಂದೂ ಅನುಬಂಧ 1 ನ್ನು ನಿಶಾನೆ ಪಿ.4 ಎಂದೂ ಅದರಲ್ಲಿನ ಸಹಿಯನ್ನು ನಿಶಾನೆ ಪಿ.4 ಎ ಎಂದು ಗುರುತಿಸಲಾಗಿದೆ.

ಈ ಪ್ರಕರಣದಲ್ಲಿನ ಆರೋಪ ಪರ ಸಾಕ್ಷಿದಾರರಾದ ರಾಮಣ್ಣ ಬಿನ್ ಹನುಮಂತಪ್ಪ ಇವರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಹೇಳಿಕೆ ನೀಡುತ್ತಾ ದಿನಾಂಕ:21.3.1998 ರಂದು ಜಗಳೂರು ತಾಲ್ಲೂಕು ದೊಣ್ಣೆಹಳ್ಳಿ ಕ್ರಾಸಿನ ಬಳಿ ಅಬಕಾರಿ ನಿರೀಕ್ಷಕರು ದಾವಣಗೆರೆ ಉಪ ವಿಭಾಗ, ಇವರು ಹಾಗೂ ಅವರ ಸಿಬ್ಬಂದಿಯವರೊಂದಿಗೆ ರಸ್ತೆಕಾವಲು ಮಾಡುತ್ತಿದ್ದಾಗ ಹೊಸಪೇಟೆ ಕಡೆಯಿಂದ ಬೆಂಗಳೂರು ಕಡೆಗೆ ಹೋಗುತ್ತಿರುವ ಟ್ಯಾಂಕರ್ ನಂ.ಕೆಎ 25 1987 ನ್ನು ನಿಲ್ಲಿಸಿ ಪರಿಶೀಲಿಸಲಾಗಿ ಅದರಲ್ಲಿ ಮದ್ಯಸಾರ ಇರುವುದು ಕಂಡು ಬಂದಿದ್ದು ಟ್ಯಾಂಕರ್ ನಲ್ಲಿ 3 ಕಂಪಾರ್ಟ್‌ಮೆಂಟ್‌ಗಳಿದ್ದು, ಪ್ರತಿಯೊಂದರಿಂದ 750 ಮಿಲಿಯ 2 ಬಾಟಲಿಗಳಲ್ಲಿ ಮದ್ಯಸಾರವನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಅವುಗಳ ಮೇಲೆ ಸಹಿ ಮಾಡಿದ ಚೀಟಿಗಳನ್ನು ಅಂಟಿಸಿ ಸೀಲ್ ಮಾಡಲಾಯಿತು. ಸ್ಥಳದಲ್ಲಿಯೇ ಪಂಚನಾಮೆ ಮಾಡಿ ಅವರ ಸಹಿಯನ್ನು ಪಂಚನಾಮೆಯ ಮೇಲೆ ಪಡೆದಿರುವುದಾಗಿ ಹೇಳಿರುತ್ತಾರೆ. ಸಹಿಯನ್ನು ವಿಚಾರಣಾ ಸಮಯದಲ್ಲಿ ಗುರುತಿಸಿ ಅವರದೇ ಆಗಿರುವುದಾಗಿ ತಿಳಿಸಿದ್ದು, ಅದನ್ನು ನಿಶಾನೆ–ಪಿ,ಬಿ ಎಂದು ಗುರುತಿಸಲಾಗಿದೆ. ಪಂಚನಾಮೆಯಲ್ಲಿನ ಸಾಕ್ಷಿದಾರರು ಈ ಮದ್ಯಸಾರವನ್ನು ಅವರ ಸಮಕ್ಷಮದಲ್ಲಿ ಸ್ಥಳ ಪಂಚನಾಮೆ ಅಡಿಯಲ್ಲಿ ಜಪ್ತಿಮಾಡಿಸುವುದಾಗಿ ಖಡಾಖಂಡಿತವಾಗಿ ಹೇಳಿರುತ್ತಾರೆ. ಅರ್ಜಿದಾರರ ಪರ ವಕೀಲರು ಈ ಪ್ರಕರಣದಲ್ಲಿ ಅಕ್ರಮ ವಾಗಿ ಮದ್ಯಸಾರ ಸಾಗಾಣಿಕೆಯಾಗಿಲ್ಲ ಎಂಬುದನ್ನು ನಿರೂಪಿಸಲು ಅಸಮರ್ಥರಾಗಿರುತ್ತಾರೆ. ಆದ್ದರಿಂದ ಈ ಪ್ರಕರಣದಲ್ಲಿ ಜಪ್ತಿ ಮಾಡಿದ ವಾಹನ ಸಂ.ಕೆ.ಎ 25–1987ರಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆ ಮಾಡಿ ಅಬಕಾರಿ ಕಾಯ್ದೆ ಕಲಂಗಳ ಉಲ್ಲಂಘನೆ ಮಾಡಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, 2ನೇ ವಿವಾದಾಂಶ ಹೌದು ಎಂದು ನಿರೂಪಿಸುತ್ತೇನೆ.

**3ನೇ ವಿವಾದಾಂಶಕ್ಕೆ ಉತ್ತರ:**

ವಾಹನದ ಮಾಲೀಕರು ಅವರ ಪರ ವಕೀಲರು ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಟದ ವಿಷಯ ತಮಗೆ ತಿಳಿದಿರುವುದಿಲ್ಲವೆಂದು ಮತ್ತು ಅವರು ನಿರ್ದೋಷಿ ಎಂದು ಖಚಿತಪಡಿಸುವ ಹೊಣೆಗಾರಿಕೆಯು ವಾಹನದ ಮಾಲೀಕರ ಮೇಲಿರುತ್ತದೆ. ವಾಹನದ ಮಾಲೀಕರು ಅವರ ಪರ ಯಾವುದೇ ಸಾಕ್ಷಿ ಮಂಡಿಸಿರುವುದಿಲ್ಲ ಹಾಗೂ ವಾಹನದಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಮುಂಜಾಗ್ರತೆ ಕ್ರಮ ಕೈಗೊಂಡ ಬಗ್ಗೆ ಈ ಪ್ರಾಧಿಕಾರಕ್ಕೆ ಮನವರಿಕೆ ಮಾಡಲು ಕಾನೂನುಬದ್ಧವಾಗಿ ಯಾವುದೇ ಅಗತ್ಯ ದಾಖಲಾತಿಗಳನ್ನು ಸಲ್ಲಿಸಿರುವುದಿಲ್ಲ, ಇದರಿಂದಾಗಿ ವಾಹನದಲ್ಲಿ ಮಾಲೀಕರು ಅಬಕಾರಿ ಕಾಯ್ದೆ ಉಲ್ಲಂಘನೆಗಾಗಿ ವಾಹನವನ್ನು ಉಪಯೋಗಿಸಬಾರದೆಂಬ ಬಗ್ಗೆ ಮುಂಜಾಗ್ರತ ಕ್ರಮ ತೆಗೆದು ಕೊಂಡಿಲ್ಲವೆಂಬ ಬಗ್ಗೆ ಈ ಪ್ರಾಧಿಕಾರಕ್ಕೆ ಸಂಪೂರ್ಣವಾಗಿ ಧೃಢಪಟ್ಟಿರುತ್ತದೆ. ಆದ್ದರಿಂದ 3ನೇ ವಿವಾದಾಂಶಕ್ಕೆ ಉತ್ತರ ಹೌದು ಎಂದು ವಿರೂಪಿಸುತ್ತೇನೆ.

ಈ ಪ್ರಕರಣದಲ್ಲಿ ಜಪ್ತಿಮಾಡಿದ ವಾಹನದ ಚಾಲಕರಾದ ಶಂಕರ್ ಬಿನ್ ಬಸಣ್ಣ ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ:16.3.2004 ರಂದು ಹೇಳಿಕೆ ನೀಡುತ್ತಾ ಅವರು ಎನ್. ನಾಗರಾಜ್ ಎಂಬ ಟ್ರಾನ್ಸ್ ಪೋರ್ಟ್‌ದಲ್ಲಿ ಕಳೆದ 7 ವರ್ಷಗಳಿಂದ ವಾಹನ ಚಾಲಕರಾಗಿ ಕಾರ್ಯನಿರ್ವಹಿಸುತ್ತಿದ್ದು ದಿನಾಂಕ: 17.3.1998 ರಂದು ಟ್ಯಾಂಕರ್ ಸಂ.ಕೆಎ 25–1987 ರಲ್ಲಿ 11.00 ಲೀ ಮದ್ಯಸಾರವನ್ನು ಸಮೀರ್ ವಾಡಿಯ ಡಿಸ್ಟಿಲರಿಯಿಂದ ಮೈಸೂರಿಗೆ ಸಾಗಿಸಲು ತುಮಕೂರು ಹತ್ತಿರ ಹೋಗುತ್ತಿದ್ದಾಗ ಅವರು ತಾಯಿಯವರ ಆರೋಗ್ಯ ಚೆನ್ನಾಗಿಲ್ಲವೆಂದು ತಿಳಿದು ಬಂದಿದ್ದು, ಅವರನ್ನು ನೋಡಲು ತುಮಕೂರಿನಿಂದ ಹೊಸಪೇಟೆಗೆ ವಾಹನವನ್ನು ತೆಗೆದುಕೊಂಡು ವಾಪಸ್ಸು ಬಂದು ಹೊಸಪೇಟೆಯಲ್ಲಿ ಇದ್ದು ಈ ವಿಷಯವನ್ನು ವಾಹನದ ಮಾಲೀಕರಿಗಾಗಲೀ ಅಥವಾ ಇನ್ಯಾರಿಗೂ ತಿಳಿಸಲಿಲ್ಲವಾಗಿ ಹೇಳಿರುತ್ತಾರೆ.

ವಾಹನದ ಮಾಲೀಕರ ಪರ ವಕೀಲರು ದಿನಾಂಕ:30.4.2004 ರಂದು ಈ ಪ್ರಾಧಿಕಾರದ ಮುಂದೆ ಅವರು ಲಿಖಿತ ವಾದವನ್ನು ಮಂಡಿಸುತ್ತಾ ವಾಹನ ಸಂ.ಕೆ.ಎ. 25–1987ರಲ್ಲಿ ಮದ್ಯಸಾರವನ್ನು ಮೆ. ಸಪ್ತಗಿರಿ ಎಂಟರ್ ಪ್ರೈಸಸ್, ಸಮೀರವಾಡಿ ಇಲ್ಲಿಂದ ಮೆ. ಲಿನ್ ಕೆಮಿಕಲ್ಸ್, ಮೇಟಗಳ್ಳಿ, ಮೈಸೂರು ಇಲ್ಲಿಗೆ ಸಾಗಾಣಿಕೆ ಮಾಡುತ್ತಿದ್ದು ಮದ್ಯಸಾರವನ್ನು ತುಂಬಿಕೊಂಡ ಟ್ಯಾಂಕರ್ ಸದರಿ ಡಿಸ್ಟಿಲರಿಯಿಂದ ದಿನಾಂಕ:16.3.1998 ರಂದು ಹೊರಟಿದ್ದು ದಿನಾಂಕ:17.3.1998 ರಂದು ಸದರಿ ಟ್ಯಾಂಕರ್ ನಲ್ಲಿ ಮದ್ಯಸಾರವನ್ನು ಸಾಗಿಸಲು ಹೊಂದಿದ್ದ ರಹದಾರಿಯನ್ನು ಅಬಕಾರಿ ನಿರೀಕ್ಷಕರು, ತುಮಕೂರು, ಇವರು ಚೆಕ್ ಮಾಡಿ ಧೃಢೀಕರಿಸಿದ್ದು ಆ ನಂತರ ದಿನಾಂಕ:21.3.1998 ರಂದು ಸದರಿ ಟ್ಯಾಂಕರ್‌ನ್ನು ಮದ್ಯಸಾರದೊಂದಿಗೆ ಅಬಕಾರಿ ನಿರೀಕ್ಷಕರು, ದಾವಣಗೆರೆ ಉಪ ವಿಭಾಗ, ಇವರು ಜಪ್ತಿಮಾಡಿದ್ದು ಮದ್ಯಸಾರಕ್ಕೂ ಹಾಗೂ ಒದಗಿಸಿರುವ ದಾಖಲಾತಿಗಳಿಗೆ ತಾಳೆ ಹೊಂದದೆ ಇದ್ದುದರಿಂದ ಇದು ಎರಡನೆಯ ಸಾಗಾಣಿಕೆಯಾಗಿರುತ್ತದೆ ಎಂದು ಅಪಾಧಿಸಿರುವುದು ಸುಳ್ಳು ಎಂದು ತಿಳಿಸಿರುತ್ತಾರೆ. ಟ್ಯಾಂಕರ್‌ನಲ್ಲಿ ಮದ್ಯಸಾರವನ್ನು ತೆಗೆದುಕೊಂಡು ತುಮಕೂರು ಸಮೀಪ ಹೋಗುತ್ತಿದ್ದಾಗ ವಾಹನದ ಚಾಲಕರಾದ ಶಂಕರ್ ಬಿನ್ ಬಸಣ್ಣ, ಇವರ ತಾಯಿಯವರು ಅನಾರೋಗ್ಯದಿಂದ ಬಳಲುತ್ತಿರುವುದಾಗಿ ದೂರವಾಣಿ ಸಂದೇಶ ಬಂದಿದ್ದರಿಂದ ಅವರು ಟ್ಯಾಂಕರ್‌ನೊಂದಿಗೆ ತುಮಕೂರಿನಿಂದ ಹೊಸಪೇಟೆಗೆ ಮರಳಿ ಹೋಗಿದ್ದು ನಂತರ 3 ದಿನಗಳ ನಂತರ ಹೊಸಪೇಟೆಯಿಂದ ಮರಳಿ ಬರುತ್ತಿದ್ದಾಗ ಟ್ಯಾಂಕರ್‌ನೊಂದಿಗೆ ಮದ್ಯಸಾರವನ್ನು ಜಪ್ತಿಮಾಡಿದ್ದು ಯಾವುದೇ ರಹದಾರಿ ಇಲ್ಲದೆ ಮದ್ಯಸಾರವನ್ನು ಸಾಗಾಣಿಕೆ ಮಾಡಿ ಅಬಕಾರಿ ಕಾಯ್ದೆಯನ್ನು ಉಲ್ಲಂಘನೆ ಮಾಡಿರುತ್ತಾರೆ ಎಂಬುದನ್ನು ಅಭಿಯೋಜನೆಯ ಪರವಾಗಿ ಸಿದ್ದಪಡಿಸಲು ವಿಫಲರಾಗಿರುತ್ತಾರೆಯಾಗಿ ವಾದ ಮಂಡಿಸಿರುತ್ತಾರೆ.

ಈ ಪ್ರಕರಣದಲ್ಲಿ ಸಹಾಯಕ ಅಭಿಯೋಗ ನಿರ್ದೇಶಕರು. ಅವರ ವಾದವನ್ನು ಮಂಡಿಸುತ್ತಾ ಅಭಿಯೋಜನ ಪರ ಸಾಕ್ಷಿದಾರರಾದ ಹೇಳಿಕೆಗಳನ್ನು ಅವಲೋಕಿಸಿದಾಗ ದಿನಾಂಕ:21.3.1998 ರಂದು ಸಂಜೆ 5.00 ಗಂಟೆಗೆ ಆರೋಪಿ ಶಂಕರ್ ಹಾಗೂ ಇತರರು ಕೆಎ 25–1987 ರಲ್ಲಿ ಜಗಳೂರು ತಾಲ್ಲೂಕಿನ ದೊಣ್ಣೆಹಳ್ಳಿ ಕ್ರಾಸ್ ಬಳಿ ಮದ್ಯಸಾರವನ್ನು ಮೈಸೂರಿಗೆ

ತೆಗೆದುಕೊಂಡು ಹೋಗುತ್ತಿದ್ದರು ಎನ್ನುವ ಅಂಶವು ರುಜುವಾತಾಗಿರುತ್ತದೆ. ದಿನಾಂಕ:16.3.1998 ರಂದು ಅಬಕಾರಿ ಅಧೀಕ್ಷಕರು, ಮೆ. ಸಪ್ತಗಿರಿ ಎಂಟರ್ ಪ್ರೈಸಸ್, ಇವರು ಮದ್ಯಸಾರವನ್ನು ಸಾಗಿಸಲು ಹಿಂಬರಹ ನೀಡಿದ್ದು ದಿನಾಂಕ:17.3.1998 ರಂದು ಅಬಕಾರಿ ನಿರೀಕ್ಷಕರು, ತುಮಕೂರು ಉಪ ವಿಭಾಗ, ಇವರು ಚೆಕ್ ಮಾಡಿ ಸಹಿ ಮಾಡಿದ್ದರೂ ನಂತರ ದಿನಾಂಕ:21.3.1998 ರಂದು ಮೇಲಿನ ಸ್ಥಳದಲ್ಲಿ ಮದ್ಯಸಾರವನ್ನು ಜಪ್ತಿಮಾಡಿದ್ದರಿಂದ 2ನೇ ಬಾರಿಗೆ ಮದ್ಯಸಾರವನ್ನು ಸಾಗಿಸುತ್ತಿದ್ದುದು ಸಾಕ್ಷಿಗಳ ಹೇಳಿಕೆಯಿಂದ ಮತ್ತು ದಾಖಲಾತಿಗಳಿಂದ ಕಂಡು ಬಂದಿರುತ್ತದೆಯಾಗಿ ವಾದ ಮಂಡಿಸಿರುತ್ತಾರೆ. ಮದ್ಯಸಾರವನ್ನು ಟ್ಯಾಂಕರ್‌ನಲ್ಲಿ ಸಾಗಿಸುತ್ತಿದ್ದಾಗ ನಿಗದಿತ ಸ್ಥಳಕ್ಕೆ ತಲುಪಿಸುವುದು ವಾಹನ ಚಾಲಕರ ಕರ್ತವ್ಯವಾಗಿತ್ತು. ಆದರೆ ಅವರ ತಾಯಿಗೆ ಹುಷಾರಿಲ್ಲವೆಂದು ತಿಳಿದು ತುಮಕೂರಿನಿಂದ ಹೊಸ ಪೇಟೆಗೆ ಮದ್ಯಸಾರ ತುಂಬಿದ ಟ್ಯಾಂಕರ್‌ನೊಂದಿಗೆ ವಾಪಸ್ಸು ಹೋಗಿದ್ದು, ಈ ವಿಷಯವನ್ನು ವಾಹನದ ಮಾಲೀಕರಿಗಾಗಲೀ ಅಥವಾ ಇತರೆ ಸಂಬಂಧಪಟ್ಟವರಿಗಾಗಲೀ ತಿಳಿಸಬೇಕಾಗಿತ್ತು. ಈ ರೀತಿ ಮಾಡದೆ ದೊಡ್ಡದಾದ ವಾಹನವನ್ನು ಮದ್ಯಸಾರದೊಂದಿಗೆ ಹಿಂದಕ್ಕೆ ತೆಗೆದುಕೊಂಡು ಹೋಗಿದ್ದಲ್ಲಿ ಸತ್ಯಾಂಶವಿಲ್ಲ ಹಾಗೂ 2ನೇ ಬಾರಿಗೆ ಮದ್ಯಸಾರವನ್ನು ಅಕ್ರಮವಾಗಿ ಸಾಗಿಸುತ್ತಿದ್ದ ಬಗ್ಗೆ ಸಂಶಯ ಉದ್ಭವಿಸುತ್ತಿದ್ದು, ಸದರಿ ಪ್ರಕರಣದಲ್ಲಿ ಅರ್ಜಿದಾರರ ಪರ ಸಲ್ಲಿಸಿದ ತೀರ್ಪುಗಳು ಈ ಪ್ರಕರಣಕ್ಕೆ ಅನ್ವಯಿಸುವುದಿಲ್ಲವಾದ್ದರಿಂದ ಅಭಿಯೋಜನೆಯು ಸದರಿ ಪ್ರಕರಣದಲ್ಲಿ ಫಿರ್ಯಾಧಿದಾರರ ಮತ್ತು ಪಂಚ ಸಾಕ್ಷಿಗಳ ಹೇಳಿಕೆಯಿಂದ ಆರೋಪವು ಸಂಪೂರ್ಣವಾಗಿ ರುಜುವಾತಾಗಿರುತ್ತದೆಯಾದ್ದರಿಂದ ಸದರಿ ಪ್ರಕರಣದಲ್ಲಿ ಅರ್ಜಿದಾರರ ಮನವಿಯನ್ನು ತಿರಸ್ಕರಿಸಿ ಜಪ್ತಾಗಿರುವ ವಾಹನ ಹಾಗೂ ವಸ್ತುವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿ ವಾದ ಮಂಡಿಸಿರುತ್ತಾರೆ.

ಈ ಪ್ರಾಧಿಕಾರದ ಮುಂದೆ ಹಾಜರಿದ್ದ ಸಹಾಯಕ ಅಭಿಯೋಜಕ ನಿರ್ದೇಶಕರು ಮತ್ತು ಅರ್ಜಿದಾರರ ಪರ ವಕೀಲರ ವಾದ–ವಿವಾದವನ್ನು ಆಲಿಸಲಾಯಿತು. ಅರ್ಜಿದಾರರ ಪರ ವಕೀಲರು ವಾದ ಮಂಡಿಸಿದ್ದು ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣೀಕೆಯಾಗಿಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ. ಸಹಾಯಕ ಅಭಿಯೋಜಕ ನಿರ್ದೇಶಕರು ವಾದ ಮಂಡಿಸುತ್ತಾ ಈಗಾಗಲೇ ಈ ಪ್ರಕರಣದಲ್ಲಿನ ಫಿರ್ಯಾಧಿದಾರರು ಹಾಗೂ ಸಾಕ್ಷಿಗಳನ್ನು ವಿಚಾರಣೆ ಮಾಡಿದ್ದು, ಸದರಿ ಸಾಕ್ಷಿ ವಿಚಾರಣೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿದೆ ಎಂಬ ಬಗ್ಗೆ ಸ್ಪಷ್ಟವಾದ ಚಿತ್ರಣ ನೀಡಿ ಈ ಪ್ರಾಧಿಕಾರಕ್ಕೆ ಮನವರಿಕೆ ಮಾಡಿರುತ್ತಾರೆ. ಆದ್ದರಿಂದ ಈ ಪ್ರಾಧಿಕಾರವು ಸಹಾಯಕ ಅಭಿಯೋಜಕ ನಿರ್ದೇಶಕರ ವಾದದಲ್ಲಿ ಸತ್ಯಾಂಶ ಇದೆ ಎಂದು ಭಾವಿಸಿದೆ.

ಅರ್ಜಿದಾರರ ಪರ ವಕೀಲರು ಹಾಗೂ ಸಹಾಯಕ ಅಭಿಯೋಜಕ ನಿರ್ದೇಶಕರು ವಾದ ವಿವಾದಗಳನ್ನು ಸಂಪೂರ್ಣವಾಗಿ ಅಲಿಸಲಾಗಿ ಈ ಪ್ರಕರಣದಲ್ಲಿ ಅರ್ಜಿದಾರರು ಸರ್ಕಾರದ ಆದಾಯಕ್ಕೆ ವಂಚನೆ ಮಾಡಿ ಅಕ್ರಮವಾಗಿ ಮದ್ಯಸಾರವನ್ನು ಸಾಗಾಣಿಕೆ ಮಾಡಿರುವುದು ಧೃಢಪಟ್ಟಿರುತ್ತದೆ. ಅಲ್ಲದೆ ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಎಲ್ಲಾ ಕಾರಣಗಳಿಂದ ಪ್ರಕರಣದಲ್ಲಿ ಜಫ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡುವಾಗ ಸಲ್ಲಿಸಿದ್ದ ಭದ್ರತೆಯನ್ನು ಸರ್ಕಾರಕ್ಕೆ ಹೊಂದಾಣಿ ಮಾಡುವುದು ಸೂಕ್ತವೆಂದು ಮನವರಿಕೆಯಾದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಇಎನ್ಸ್:ಇ:ಡಿಟಿಸಿಆರ್:553:97–98, ದಿನಾಂಕ:30ನೇ ಏಪ್ರಿಲ್ 2007**

ಬಿ.ಪಿ. ಹೂವಪ್ಪಗೌಡ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ಯಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ದಾವಣಗೆರೆ ಉಪ ವಿಭಾಗ, ಇವರು ದಾಖಲಿಸಿದ ಗುನ್ನೆ ಸಂ:ದಾಉವಿ :ಆಇ:ಪ್ರ ವ,ವ. 44:97–98 ದಿ,:21.3.1998 ರ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂ. ಕೆಎ 25–1987 ರಲ್ಲಿ ಸರ್ಕಾಕ್ಕೆ ಮುಟ್ಟುಗೊಳು ಹಾಕಿಕೊಳ್ಳಲು ಆದೇಶಿಸಿರುತ್ತೇನೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ 11.000 ಲೀ ಮದ್ಯಸಾರದಲ್ಲಿ ರಾಸಾಯನಿಕ ವಿಶ್ಲೇಷಣೆಗಾಗಿ ತೆಗೆದು ಮಾದರಿಯನ್ನು ಹೊರತುಪಡಿಸಿ ಉಳಿದ ಮದ್ಯಸಾರವನ್ನು ವಿಲೇಮಾಡಿದ ಕ್ರಮವನ್ನು ಸಿಂಧುತ್ವಗೊಳಿಸಲಾಗಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:30.4.2007ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಅಧೀಕ್ಷಕರು, ಇ.ಐ.ಬಿ. ದಾವಣಗೆರೆ ಜಿಲ್ಲೆ,
ದಾವಣಗೆರೆ

**ಅನುಬಂಧ–1**

ಪಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

| | |
|---|---|
| ಪ್ರಾ.ಸಾ. 1– | ಶ್ರೀ ಶಂಕರ್ ಬಿನ್ ಬಸಣ್ಣ, ಮಸೀದಿ ಸಮೀಪ ಜಮಖಂಡಿ, ಬಿಜಾಪುರ ಜಿಲ್ಲೆ. |
| ಪ್ರಾ.ಸಾ. 2 | ಶ್ರೀ ರಾಮಣ್ಣ ಬಿನ್ ಹನುಮಂತಪ್ಪ, ಮಸ್ಸೂರು, ಜಗಳೂರು ತಾಲ್ಲೂಕು |
| ಪ್ರಾಸಾ 3 | ಶ್ರೀ ರಾಜು ಬಿನ್ ಪರಮೇಶ್ವರಪ್ಪ ತುಮ್ಮಿನಗಟ್ಟ, ಹೊಳಲ್ಕೆರೆ ತಾಲ್ಲೂಕು |

ಅನುಬಂಧ–2

ಫಿರ್ಯಾಧಿದಾರರ ಪರ ಮಂಡಿಸಲಾದ ದಾಖಲಾತಿಗಳು

1. ಪಂಚನಾಮೆ ಪ್ರತಿ
2. ಪ್ರಥಮ ವರ್ತಮಾನ ವರದಿ ಪ್ರತಿ
3. ಸ್ವತ್ತಿನ ಪಟ್ಟಿ
4. ರಾಸಾಯುನಿಕ ತಜ್ಞರ ವರದಿ

ಅನುಬಂಧ–2

ವಾಹನದ ಮಾಲೀಕರ ಪರ ವಿಚ್ಚಾರಣೆ ಮಾಡಿದ ಸಾಕ್ಷಿದಾರರು:

ಇಲ್ಲ

ಅನುಬಂಧ–4

ವಾಹನದ ಮಾಲೀಕರ ಪರ ಗುರುತಿಸಲಾದ ದಾಖಲೆಗಳು:

ಇಲ್ಲ

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಪಿ.ಆರ್. 653 ಅಬಕಾರಿ ಅಧೀಕ್ಷಕರು, ಇ.ಐ.ಬಿ. ದಾವಣಗೆರೆ ಜಿಲ್ಲೆ,
ದಾವಣಗೆರೆ

**ಅಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ ರವರ ಕಛೇರಿ ನಡುವಳಿಗಳು**

**ಗುನ್ನೆ ನಂ:02/2006–07 ದಿ:7.8.2006**

**ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ**

**ನಂ:ಇಎಕ್ಸ್‌ಇ:ಬಿಜೆಪಿ:ಇಐಬಿ:ಡಿಟಿಸಿಆರ್:17/2006–07, ದಿ:24ನೇ ಫೆಬ್ರವರಿ 2007**

| | |
|---|---|
| **ಉಪಸ್ಥಿತರು :** | ಕೆ.ಆರ್. ಗೌಡ್ರ<br>ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು<br>ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ |
| **ಪಿರ್ಯಾಧಿದಾರರು** | ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ |
| **ವಿರುದ್ಧ:** | |
| **ಆರೋಪಿತರು:** | ಇಲ್ಲಾ |
| **ವಾಹನ ಮಾಲೀಕರು:** | ಶ್ರೀ ಚನ್ನಪ್ಪ ಮಲ್ಲಪ್ಪಾ ಕಾಮಗಾರಿ ಸಾ:ಮುಳವಾಡ,<br>ತಾ:ಬ.ಬಾಗೇವಾಡಿ, ಜಿ:ಬಿಜಾಪೂರ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:7.8.2006 ರಂದು ಮದ್ಯ ರಾತ್ರಿ 1.30 ಗಂಟೆಗೆ ಬಿಜಾಪೂರ ತಾಲ್ಲೂಕು ಜಾರಿ ಮತ್ತು ತನಿಖೆ ಕಛೇರಿಯ ಅಬಕಾರಿ ಉಪ ನಿರೀಕ್ಷಕರು, ಅಬಕಾರಿ ಸಿಬ್ಬಂದಿಯವರು ಮತ್ತು ಪಂಚ ಜನರು ಬಿಜಾಪೂರ– ಬಾಗಲಕೋಟೆ ರಸ್ತೆಯಲ್ಲಿರುವ ಹೊನಗನಹಳ್ಳಿ ಗ್ರಾಮದ ಹತ್ತಿರ ರಸ್ತೆ ಕಾವಲು ಮಾಡುತ್ತಾ ನಿಂತಾಗ ಒಂದು ದ್ವಿಚಕ್ರ ವಾಹನ ಬರುವುದನ್ನು ಕಂಡರು ರಸ್ತೆ ಮೇಲೆ ವಾಹನ ಸವಾರದಾರನು ಸಮವಸ್ತ್ರದಲ್ಲಿದ್ದ ಸಿಬ್ಬಂದಿ ಜನರನ್ನು ಕಂಡು ರಸ್ತೆ ಪಕ್ಕದಲ್ಲಿ ವಾಹನವನ್ನು ಒಗೆದು ರಸ್ತೆಯ ಬದಿಯಲ್ಲಿರುವ ಹೊಲಗಳಿಗೆ ಜಿಗಿದು ಓಡಲು ಪ್ರಾರಂಬಿಸಿದಾಗ ಅವರನ್ನು ಹಿಡಿಯಲು ಪ್ರಯತ್ನಿಸಿದರು ಅವರು ಕತ್ತಲಲ್ಲಿ ಪರಾರಿ ಆಗಿರುತ್ತಾರೆ. ಸದರಿ ಸ್ಥಳದ ಹತ್ತಿರ ಬಂದಾಗ ಅದನ್ನು ನೋಡಲಾಗಿ ಅದು ಒಂದು ಹಿರೋ ಹೊಂಡಾ ಸಿ.ಬಿ.ಝು ದ್ವಿಚಕ್ರ ವಾಹನ ಅದರ ನಂ:ಕೆಎ–28–ಕೆ–8757 ಇರುವುದು ತಿಳಿದುಕೊಂಡು ಸದರಿ ದ್ವಿಚಕ್ರ ವಾಹನದ ಪಕ್ಕದಲ್ಲಿ ಒಂದು ಬಟ್ಟೆ ಕಟ್ಟಿದ ಗಂಟು ಮತ್ತು ಒಂದು ಮೋಟಾರ ಟ್ಯೂಬ ಬಿದ್ದಿತ್ತು. ಅವುಗಳನ್ನು ಪರಿಶೀಲಿಸಲಾಗಿ ಮೋಟಾರ ಟ್ಯೂಬ ಬಿಚ್ಚಿ ನೋಡಲಾಗಿ ಅದರಲ್ಲಿ 35 ಲೀಟರ ಮತ್ತು ಇನ್ನೊಂದು ಪಕ್ಕದಲ್ಲಿ ಬಟ್ಟೆ ಗಂಟನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಒಚಿದು ಮೋಟಾರ ಟ್ಯೂಬವಿದ್ದು, ಅದರಲ್ಲಿಯು 20 ಲೀಟರ ಹೀಗೆ ಒಟ್ಟು 55 ಲೀಟರ ಘಾಟ ವಾಸನೆಯ ದ್ರವ ಪದಾರ್ಥ ಇದ್ದು, ಇದು ಕಳ್ಳಭಟ್ಟಿ ಸಾರಾಯಿ ಇರುವುದು ಗೊತ್ತಾಗಿರುತ್ತದೆ. ತದನಂತರ ಸದರಿ ಹೊರೋ ಹೊಂಡಾ ಸಿ.ಬಿ.ಝು ದ್ವಿಚಕ್ರ ವಾಹನವನ್ನು ಪರಿಶೀಲಿಸಲಾಗಿ ಅದರ ನಂ.ಕೆ.ಎ–28–ಕೆ–8757, ಚಸ್ಸಿ ನಂಬ :02G 4C 892 ಮತ್ತು ಇಂಜಿನ ನಂ 02 GIM00391 ಇರುತ್ತದೆ. ನಂತರ ಎರಡು ಮೋಟಾರ ಟ್ಯೂಬಗಳಲ್ಲಿದ್ದ ಕಳ್ಳಭಟ್ಟಿ ಸಾರಾಯಿಂದ 180 ಮಿಲಿಯ ಎರಡು ಬಾಟಲಿಗಳಲ್ಲಿ ರಸಾಯನ ಪರೀಕ್ಷೆಗಾಗಿ ಕಳ್ಳಭಟ್ಟಿ ಸಾರಾಯಿಯನ್ನು ತೆಗೆದುಕೊಂಡು ಶೀಲ ಮಾಡಿ ಪಂಚರ ಹಾಗೂ ಅಬಕಾರಿ ಉಪ ನಿರೀಕ್ಷಕರು ಇವರ ಸಹಿ ಚೀಟಿಗಳನ್ನು ಅಂಟಿಸಿ ಮುದ್ದೇಮಾಲನ್ನು ಹಾಗೂ ದ್ವಿಚಕ್ರ ವಾಹನವನ್ನು ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು ತಮ್ಮ ತಬಾಕ್ಕೆ ತೆಗೆದುಕೊಂಡು ಘಟನೆ ನಡೆದ ಸ್ಥಳದಲ್ಲಿ ಪಂಚರ ಸಮಕ್ಷಮ ಪಂಚನಾಮೆ ಕ್ರಮ ಜರುಗಿಸಿರುತ್ತಾರೆ. ನಂತರ ಗುನ್ನೆ ನಂ02/2006–07ನ್ನು ದಾಖಲಿಸಿ ಪ್ರಥಮ ವರ್ತಮಾನ ವರದಿಯನ್ನು ಮಾನ್ಯ ಜೆ.ಎಂಎಫ್.ಸಿ ನ್ಯಾಯಾಲಯ ಬಿಜಾಪೂರದಲ್ಲಿ ಸರ್ಕಾರಿ ತರ್ಫೆ ಪಿರ್ಯಾಧಿಯನ್ನು ಸಲ್ಲಿಸಿರುತ್ತಾರೆ. ಮುಂದಿನ ಕ್ರಮಕ್ಕಾಗಿ ಪ್ರಥಮ ವರ್ತಮಾನ ವರದಿ ಮತ್ತು ಮಾಲು ಜಪ್ತು ಪಂಚನಾಮೆಯೊಂದಿಗೆ ಈ ಕಚೇರಿಗೆ ವರದಿ ಸಲ್ಲಿಸಿರುತ್ತಾರೆ.

ನಂತರ ಪಿರ್‍ಯಾಧಿದಾರರು ರಸಾಯನಿಕ ಮಾದರಿಯನ್ನು ರಸಾಯನಿಕ ತಜ್ಞರಿಗೆ ಕಳುಹಿಸಿ ವರದಿ ಪಡೆದಿರುತ್ತಾರೆ. ಸದರಿ ರಸಾಯನಿಕ ತಜ್ಞರ ವರದಿಯಲ್ಲಿ ಜಪ್ತಾದ ಕಳ್ಳಭಟ್ಟಿ ಸಾರಾಯಿಯಲ್ಲಿ 75.9 ಯು.ಪಿ ಮದ್ಯಸಾರದ ಅಂಶವಿದ್ದು, ಇದು ಮಾನವ ಸೇವನೆಗೆ ಯೋಗ್ಯವಿರುವುದಿಲ್ಲವೆಂದು ದೃಢಪಡಿಸಿರುತ್ತಾರೆ, ನಂತರ ಈ ಪ್ರಾಧಿಕಾರದಿಂದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿಜಾಪೂರ ಇವರಿಗೆ ಜಪ್ತು ಮಾಡಿದ ವಾಹನದ ಬಿ–ಎಕ್ಸಟ್ರ್ಯಾಕ್ಸ್ ಕಳೂಹಿಸಲು ಕೋರಿ ಪತ್ರ ಬರೆಯಲಾಗಿದೆ. ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಸದರಿ ವಾಹನದ ಬಿ–ಎಕ್ಸಟ್ರ್ಯಾಕ್ಟನಲ್ಲಿ ದ್ವಿಚಕ್ರ ವಾಹನ ಸಂಖ್ಯೆ ಕೆಎ–28–ಕೆ–8757 ಮತ್ತು ವಾಹನ ಮಾಲೀಕರ ಹೆಸರು ಶ್ರೀ ಚನ್ನಪ್ಪಾ ತಂದೆ ಮಲ್ಲಪ್ಪಾ ಕಾಮಗಾರಿ, ಸಾ:ಮುಳವಾಡ, ತಾ:ಬ.ಬಾಗೇವಾಡಿ, ಜಿ:ಬಿಜಾಪೂರ ಅಂತಾ ತಿಳಿಸಿರುತ್ತಾರೆ.

ದಿನಾಂಕ:27.12.2006 ರಂದು ಈ ಪ್ರಾಧಿಕಾರದಿಂದ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43(ಬಿ) ಪ್ರಕಾರ ಕಾರಣ ಕೇಳುವ ನೋಟಿಸನ್ನು ಸದರಿ ವಾಹನ ಮಾಲೀಕರಾದ ಶ್ರೀ ಶ್ರೀ ಚನ್ನಪ್ಪಾ ತಂದೆ ಮಲ್ಲಪ್ಪಾ ಕಾಮಗಾರಿ, ಸಾ:ಮುಳವಾಡ, ತಾ:ಬ. ಬಾಗೇವಾಡಿ. ಜಿ:ಬಿಜಾಪೂರ ಇವರಿಗೆ ನೋಟಿಸ್__........................ ಹೊರಡಿಸಲಾಯಿತು. ಸದರಿ ನೋಟಿಸನ್ನು ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ ಇವರು ಸದರಿ ವಾಹನ ಮಾಲೀಕರಿಗೆ ಜಾರಿ ಮಾಡಿ ಈ ಕಛೇರಿಗೆ ಸ್ವೀಕೃತಿ ಪತ್ರ ಸಲ್ಲಿಸಿರುತ್ತಾರೆ. ದಿನಾಂಕ:1.2.2007 ರಂದು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ಕಲಂ 43(ಎ) ಪ್ರಕಾರ ಈ ಪ್ರಾಧಿಕಾರವು ದಿನಾಂಕ:22.2.2007 ರಂದು ವಿಚಾರಣೆ ನಡೆಸಲಾಗುವುದೆಂದು ಎಲ್ಲ ಸಾಕ್ಷಿದಾರರಿಗೆ ನೋಟಿಸು ತೆಗೆಯಲಾಯಿತು.

ದಿನಾಂಕ:22.2.2007 ರಂದು ವಿಚಾರಣೆಯನ್ನು ನಡೆಸಲಾಯಿತು ಅಭಿಯೋಗದ ಪರವಾಗಿ ಸಾಕ್ಷಿದಾರರಾದ ಪ್ರಸಾ.–1, ಪ್ರಾಸಾ–2 ವಿಚಾರಣೆ ಮಾಡಿ ಮೂರು (03) ದಾಖಲಾತಿಗಳನ್ನು ಮತ್ತು ಎರಡು ಮುದ್ದೇಮಾಲುಗಳನ್ನು ಗುರುತಿಸಿದ್ದು ಇರುತ್ತದೆ.

ಪ್ರಾಸಾ–1 ಇವರು ಸಾಕ್ಷಿ ನುಡಿಯುತ್ತಾ ದಿನಾಂಕ:6.8.2006 ರಂದು ರಾತ್ರಿ 7.30 ಗಂಟೆಗೆ ಪಂಚ ಜನರನ್ನು ತಮ್ಮ ಕಛೇರಿಗೆ ಕರೆಯಿಸಿಕೊಂಡು ವಿಷಯವನ್ನು ತಿಳಿಸಿ ಪಂಚರೊಂದಿಗೆ ತಮ್ಮ ಕಛೇರಿಯಿಂದ ಹೊರಟು ರಸ್ತೆ ಕಾವಲು ಮಾಡುತ್ತಾ ಬಾಗಲಕೋಟೆ ಬಿಜಾಪೂರ ರಸ್ತೆಯ ಹೊನಗನಹಳ್ಳಿ ಗ್ರಾಮದ ಹತ್ತಿರ ಬಂದಾಗ ಆಗ ಸಮಯ ದಿನಾಂಕ:7.8.2006 ಮದ್ಯ ರಾತ್ರಿ 1.30 ಗಂಟೆ ಆಗಿತ್ತು ಅಲ್ಲಿ ರಸ್ತೆಯ ಬದಿಯಲ್ಲಿ ನಿಂತುಕೊಂಡು ಆ ರಸ್ತೆಯಲ್ಲಿ ಹಾಯ್ದು ಹೋಗುವ ವಾಹನಗಳ ಮೇಲೆ ನಿಗಾ ಇಟ್ಟುಕೊಂಡು ನಂತರು ರಸ್ತೆ ಕಾವಲು ಮಾಡುತ್ತಿರುವಾಗ ಒಂದು ದ್ವಿಚಕ್ರ ವಾಹನವೊಂದು ಬರುತ್ತಿರುವುದು ಕಂಡುರು ಆಗ ಅದನ್ನು ಪರಿಶೀಲನೆ ನಡೆಸುವ ಕುರಿತು ನಿಲ್ಲಿಸಲು ಹೋದರು, ಆ ದ್ವಿಚಕ್ರ ವಾಹನ ಸವಾರನು ಸಮವಸ್ತ್ರದಲ್ಲಿದ್ದ ಅಧಿಕಾರಿಗಳನ್ನು ನೋಡಿ ಗುರ್ತು ಹಿಡಿದು ಆ ದ್ವಿಚಕ್ರ ವಾಹನವನ್ನು ಒಗೆದು ರಸ್ತೆಯ ಬದಿಯಲ್ಲಿರುವ ಹೊಲಗಳಿಗೆ ಜಿಗಿದು ಓಡಲು ಆರಂಬಿಸಿದರು, ಅವರು ಇಬ್ಬರು ಜನರಿದ್ದರು, ಅವರನ್ನು ಹಿಡಿಯಲು ಪ್ರಯತ್ನಿಸಿದಾಗ ಓಡಿ ಹೋಗಿ ಕತ್ತಲಲ್ಲಿ ಗುರುತಿಸಲು ಸಾಧ್ಯವಾಗಲಿಲ್ಲಾವೆಂದು ಸಾಕ್ಷಿ ನುಡಿದಿರುತ್ತಾರೆ. ಆಗ ಸಂಶಯ ಬಂದು ದ್ವಿಚಕ್ರ ವಾಹನ ಒಗೆದ ಸ್ಥಳಕ್ಕೆ ಬಂದು ಟಾರ್ಚ ಬೆಳಕಿನ ಸಹಾಯದಿಂದ ನೋಡಲಾಗಿ ಅಲ್ಲಿ ಒಂದು ದ್ವಿಚಕ್ರ ವಾಹನ ಬಿದ್ದಿದು, ಅದನ್ನು ಪರಿಶೀಲಿಸಲಾಗಿ ಅದು ಒಂದು ಹಿರೋ ಹೊಂಡಾ ಸಿಬಿಝು ಕಂಪನಿಯ ದ್ವಿಚಕ್ರವಾಹನವಾಗಿತ್ತು ಅದರ ನೊಂದಣಿ ಸಂಖ್ಯೆ:ಕೆಎ–26–ಕೆ–8757 ಅದರ ಇಂಜಿನ ನಂ:02ಜೆ41ಎಂ00391, ಚೆಸ್ಸಿ ನಂ:02ಗಿ–16ಸಿ00892 ಅದರ ಪಕ್ಕದಲ್ಲಿ ಒಂದು ಬಟ್ಟೆ ಕಟ್ಟಿದ ಗಂಟು ಮತ್ತು ಒಂದು ಮೋಟಾರು ಟ್ಯೂಬ ಬಿದ್ದಿತ್ತು, ಆಗ ಅವುಗಳನ್ನು ಪರಿಶಿಲಿಸಲಾಗಿ ಮೋಟಾರ ಟ್ಯೂಬ ನೋಡಲಾಗಿ ಅದರಲ್ಲಿ 35 ಲೀಟರ, ಮತ್ತು ಇನ್ನೊಂದು ಪಕ್ಕದಲ್ಲಿದ್ದ ಬಟ್ಟೆ ಗಂಟನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಒಂದು ಮೋಟಾರ ಟ್ಯೂಬವಿದ್ದು, ಅದರಲ್ಲಿಯು 20 ಲೀಟರ ಹೀಗೆ ಒಟ್ಟು 55 ಲೀಟರ ಕಗ್ಗವ ಹುಳಚು ವಾಶನೆಯ ದ್ರವ ಪದಾರ್ಥ ಇದ್ದು, ಇದು ಕಳ್ಳಭಟ್ಟಿ ಸಾರಾಯಿ ಇರುವದು ಗೊತ್ತಾಗಿರುತ್ತದೆ. ಅನಂತರ ತಲಾ ಒಂದೊಂದು ಟ್ಯೂಬನಿಂದ 180 ಲೀಟರ ಮಿಲಿಯ ಎರಡು ಬಾಟಲಿನಲ್ಲಿ ಕಳ್ಳಭಟ್ಟಿ ಸಾರಾಯಿಯನ್ನು ರಸಾಯನಿಕ ಪರೀಕ್ಷೆಗಾಗಿ ಹೊರ ತೆಗೆದು ಅದಕ್ಕೆ ತಮ್ಮವ ಪಂಚರ ಸಹಿನಿಸಿದ ಚೀಟಿ ಲಗ್ತಿತ್ತಿಸಿ ಸರ್ಕಾರಿ ಶೀಲು ಮಾಡಿ, ಕಳ್ಳಭಟ್ಟಿ ಸಾರಾಯಿ ತುಂಬಿದ ಟ್ಯೂಬಗಳನ್ನು ಮತ್ತು ದ್ವಿಚಕ್ರವಾಹನವನ್ನು ಪಂಚರ ಸಹಿ ಮತ್ತು ತಮ್ಮ ತಮ್ಮ ಸಹಿನಿಸಿದ ಚೀಟಿಗಳನ್ನು ಅಂಟಿಸಿ ತಮ್ಮ ತಾಬಾಕ್ಕೆ ತೆಗೆದುಕೊಳ್ಳಲಾಯಿತೆಂದು ಸಾಕ್ಷಿ ನೀಡಿದಿರುತ್ತಾರೆ. ಸದರಿ ಜಪ್ತಾದ ಮುದ್ದೇಮಾಲನ್ನು ಈಗ ನೋಡುತ್ತಿದ್ದು, ಅವುಗಳನ್ನು ಎಂಓ–01 ಮತ್ತು ದ್ವಿಚಕ್ರ ವಾಹನವನ್ನು ಎಂಓ–2 ಎಂದು ಗುರುತಿಸಿರುತ್ತಾರೆ ಘಟನೆ ನಡೆದ ಸ್ಥಳದಲ್ಲಿಯೇ ಮಾಲು ಜಪ್ತು ಪಂಚನಾಮೆಯನ್ನು ಸಮಯ ಮದ್ಯ ರಾತ್ರಿ 01–30 ರಿಂದ 2.30 ರ ವರೆಗೆ ಟಾರ್ಚ ಬೆಳಕಿನಲ್ಲಿ ಬರೆಯಲಾಯಿತ್ತೆಂದು ಸಾಕ್ಷಿ ನುಡಿದಿರುತ್ತಾರೆ. ಸದರಿ ಪಂಚನಾಮೆಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ–ಪಿ–1 ಮತ್ತು ಅದರಲ್ಲಿ ಇರುವ ತಮ್ಮ ಸಹಿಯನ್ನು ನಿಶಾನೆ–ಪಿ–1 (ಎ) ಎಂದು ಗುರುತಿಸಿರುತ್ತಾರೆ. ಮಾಲು ಜಪ್ತು ಪಂಚನಾಮೆ ಮಾಡಿ ಗುನ್ನೆ ನಂ:02/2006–07ರ ಅಡಿಯಲ್ಲಿ ಪ್ರಥಮ ವರ್ತಮಾನ ವರದಿಯನ್ನು ತಯಾರಿಸಿರುತ್ತೇನೆಂದು ಸಾಕ್ಷಿ ನುಡಿದಿರುತ್ತಾರೆ. ಸದರಿ ಪ್ರಥಮ ವರ್ತಮಾನ ವರದಿಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ–ಪಿ–2 ಅದರಲ್ಲಿ ಇರುವ ತಮ್ಮ ಸಹಿಯನ್ನು ನಿಶಾನೆ–ಪಿ–2(ಎ) ಎಂದು ಗುರುತಿಸಿರುತ್ತಾರೆ. ನಂತರ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ ಬಿಜಾಪೂರ ಪಂಚನಾಮೆಯೊಂದಿಗೆ ಪ್ರಥಮ ವರ್ತಮಾನ ವರದಿ ಸಂಖ್ಯೆ 02/2006–07 ದಿನಾಂಕ:7.8.2006 ರ ಗುನ್ನೆ ದಾಖಲು ಮಾಡಿದ ಬಗ್ಗೆ ಫೀರ್‍ಯಾಧಿಯನ್ನು ಸಲ್ಲಿಸಲಾಗುತ್ತದೆಂದು ಸಾಕ್ಷಿ ನುಡಿದಿರುತ್ತಾರೆ.

ಸದರಿ ಪ್ರಕರಣ ಮುಂದಿನ ತನಿಖೆಯ ಕುರಿತು ದಿನಾಂಕ:25.9.2006 ರಂದು ತಮ್ಮ ಕಛೇರಿಯ ಮುಖ ಪತ್ರದೊಂದಿಗೆ ಸದರಿ ಗುನ್ಹೆಯಲ್ಲಿ 180 ಮಿಲಿಯ ಕಳ್ಳಭಟ್ಟಿ ಸಾರಾಯಿ ಬಾಟಲಿಗಳನ್ನು ತಮ್ಮ ಕಛೇರಿಯ ಅಬಕಾರಿ ರಕ್ಷಕರಾದ ಶ್ರೀ ಎಸ್.ಎಂ. ಹುದ್ದಾರ ಇವರ ಜೊತೆಗೆ ಮುಖ್ಯ ರಸಾಯನಿಕ ತಜ್ಞರು (ಅಬಕಾರಿ) ಬೆಂಗಳೂರು ಇವರಿಗೆ ರಸಾಯನಿಕ ಪರೀಕ್ಷೆಗಾಗಿ ಕಳುಹಿಸಿಕೊಟ್ಟು ರಸಾಯನಿಕ ತಜ್ಞರಿಂದ ಪ್ರಮಾಣ ಪತ್ರ ಪಡೆದುಕೊಂಡಿರುತ್ತಾರೆ. ಸದರಿ ರಸಾಯನಿಕ ಪ್ರಮಾಣ ಪತ್ರದಲ್ಲಿ ಜಪ್ತಾದ ಕಳ್ಳಭಟ್ಟಿ ಸಾರಾಯಿಯಲ್ಲಿ 74.7. ಯು.ಪಿ. ಮದ್ಯಸಾರದ ಅಂಶವಿದ್ದು, ಇದು ಮಾನವನ ಸೇವೆನೆಗೆ ಯೋಗ್ಯ ಇರುವುದಿಲ್ಲಾ ಎಂದು ತಿಳಿಸಿರುತ್ತಾರೆ ಸದರಿ ರಸಾಯನಿಕ ಪ್ರಮಾಣ ಪತ್ರ ಈಗ ನೋಡುತ್ತಿದ್ದು ಅದನ್ನು ನಿಶಾನೆ–ಪಿ–4 ಎಂದು ಗುರುತಿಸಿರುತ್ತಾರೆ ಸಾಕ್ಷಿದಾರರ ಸಾಕ್ಷಿ ಹೇಳುವ ಸಮಯದಲ್ಲಿ ವಾಹನ ಮಾಲೀಕರು ಹಾಜರ ಇಲ್ಲದಿರುವುದರಿಂದ ಯಾವುದೇ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು. ವಾಹನ ಮಾಲೀಕರ ಗೈರ ಹಾಜರೂ ಮತ್ತು ಸಾಕ್ಷಿದಾರರ ಹೇಳಿಕೆಯನ್ನು ಅವಲೋಕಿಸಿದಾಗ ಸದರಿ ವಾಹನ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಲ್ಲಿ ತೊಡಗಿರುವುದಕ್ಕೆ ಪುಷ್ಠಿ ನೀಡುತ್ತದೆ.

ಪ್ರಾಸಾ–2 ಇವರು ಪಂಚ ಸಾಕ್ಷಿಯಾಗಿದ್ದು. ಸಾಕ್ಷಿ ನುಡಿಯುತ್ತಾ ದಿನಾಂಕ:6.8.2006 ರ ಸಮಯ ರಾತ್ರಿ 7.30 ಗಂಟೆಗೆ ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ ತಾಲ್ಲೂಕು ಇವರು ತಮ್ಮನ್ನು ಕಛೇರಿಗೆ ಕರೆಯಿಸಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಹಾಗೂ ಮಾರಾಟವನ್ನು ತಡೆಯುವ ಉದ್ದೇಶದಿಂದ ಅಬಕಾರಿ ಅಧಿಕಾರಿಗಳು ಹಾಗೂ ಸಿಬ್ಬಂದಿ ಜನರು ರಸ್ತೆಗಾವಲು ಮಾಡಲು ಹೊರಟಿದ್ದು ಒಂದು ವೇಳೆ ಅಪರಾಧ ಪತ್ತೆಯಾದಲ್ಲಿ ತಾವುಗಳು ಪಂಚರಾಗಿ ಪಂಚನಾಮೆಯನ್ನು ............... ಎಂದು ಕೇಳಿಕೊಂಡರು, ಆಗ ಅದಕ್ಕೆ ಒಪ್ಪಿಕೊಂಡು ಅಬಕಾರಿ ಅಧಿಕಾರಿಗಳ ಜೊತೆ ಹೊರಟು ಬಿಜಾಪೂರದಿಂದ ........................ ಮಾಡುತ್ತಾ ದಿನಾಂಕ:7.8.2006 ರ ಸಮಯ ರಾತ್ರಿ 1/30 ಗಂಟೆಗೆ ಬಾಗಲಕೋಟ–ಬಿಜಾಪೂರ ರಸ್ತೆಯಲ್ಲಿ ಹೊನಗನಹಳ್ಳಿ ಗ್ರಾಮದ ಹತ್ತಿರ ಬಂದು ನಿಂತಿಕೊಂಡರು ರಸ್ತೆಗಾವಲು ಮಾಡುತ್ತಿರುವಾಗ ದೂರದಲ್ಲಿ ಒಂದು ದ್ವಿಚಕ್ರ ವಾಹನ ಬರುತ್ತಿರುವುದನ್ನು ಕಂಡು ಸಂಶಯಗೊಂಡ ಅಧಿಕಾರಿಗಳ ಹಾಗೂ ಸಿಬ್ಬಂದಿ ರಸ್ತೆ ಮೇಲೆ ಬಂದು ನಿಂತಾಗ ಆಗ ಸವಾರದಾರನು ಸಮವಸ್ತ್ರದಲ್ಲಿದ್ದ ಅಧಿಕಾರಿಗಳ ಹಾಗೂ ಸಿಬ್ಬಂದಿನ್ನು ವಾಹನವು ಹೆಡ್‌ಲೈಟ್ ಬೆಳಕಿನಲ್ಲಿ ಕಂಡು ವಾಹನ ಬಿಟ್ಟು ಓಡಿ ಹೋದರು ಆಗ ಅಬಕಾರಿ ಸಿಬ್ಬಂದಿಯವರು ಅವರನ್ನು ಬೆನ್ನಟ್ಟಿ ಹಿಡಿಯಲು ಪ್ರಯತ್ನಿಸಿದರು. ಆದರೆ ಅವರು ಕತ್ತಲಲ್ಲಿ ಪರಾರಿಯಾದರು. ಅಂತಾ ಸಾಕ್ಷಿ ನುಡಿದಿರುತ್ತಾರೆ. ನಂತರ ಅಧಿಕಾರಿಗಳೊಂದಿಗೆ ವಾಹನ ಬಿದ್ದ ಸ್ಥಳಕ್ಕೆ ಬಂದು ಓಡಲಾಗಿ ಅಲ್ಲಿ ಒಂದು ದ್ವಿಚಕ್ರ ವಾಹನವಿದ್ದು ಅದರ ನೋಂದಣಿ ಸಂಖ್ಯೆ:ಕೆಎ–28–ಕೆ–8757 ಇದ್ದು, ವಾಹನದ ಪಕ್ಕದಲ್ಲಿ ಒಂದು ಬಟ್ಟೆ ಕಟ್ಟಿದ ಗಂಟು ಬಿದ್ದಿದ್ದು ಅದನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಒಂದು ಮೋಟಾರ ಟ್ಯೂಬ್‌ವಿದ್ದು ಅದರಲ್ಲಿ ಸುಮಾರು 20 ಲೀಟರ ಮತ್ತು ಪಕ್ಕದಲ್ಲಿ ಮತ್ತೊಂದು ಮೋಟಾರ ಟ್ಯೂಬ್ ಬಿದಿದ್ದು ಕಂಡು ಅದನ್ನು ಬಿಚ್ಚಿ ನೋಡಲಾಗಿ ಅದರಲ್ಲಿ 35 ಲೀಟರ ಹೀಗೆ ಅವುಗಳಲ್ಲಿ ಒಟ್ಟು ಅಂದಾಜು 55. ಲೀಟರ ಕಗ್ಗವ ಹುಳುಚು ವಾಸನೆಯ ದ್ರವ ಪದಾರ್ಥವಿದ್ದು, ಇದು ಕಳ್ಳಭಟ್ಟಿ ಸಾರಾಯಿ ಇರುವುದು ಗೊತ್ತಾಗಿರುತ್ತದೆ. ಆಗ ಅಧಿಕಾರಿಗಳು ಸದರಿ ಟ್ಯೂಬಗಳಿಂದ ತಲಾ ಒಂದೊಂದರಂತೆ 180 ಎಂಎಲ್‌ದ ಎರಡು ಬಾಟಲಿಗಳಲ್ಲಿ ಕಳ್ಳಭಟ್ಟಿ ಸಾರಾಯಿಯನ್ನು ರಸಾಯನಿಕ ಪರೀಕ್ಷೆಗಾಗಿ ತೆಗೆದು ಅವುಗಳನ್ನು ಶೀಲು ಮಾಡಿ ಅದಕ್ಕೆ ತಮ್ಮುವ ಅಧಿಕಾರಿಗಳ ಸಹಿನಿಸಿದ ಚೀಟಿಗಳನ್ನು ಅಂಟಿಸಿ ಸಕಾರಿ ಶೀಲಿನಿಂದ ಶೀಲು ಮಾಡಿದರು, ನಂತರ ಟ್ಯೂಬಗಳನ್ನು ಕಟ್ಟಿ ಅದಕ್ಕೆ ತಮ್ಮುವ ಅಧಿಕಾರಿಗಳ ಸಹಿನಿಸಿದ ಚೀಟಿಗಳನ್ನು ಅಂಟಿಸಿದರು. ದ್ವಿಚಕ್ರ ವಾಹನ ಮತ್ತು ಮುದ್ದೇಮಾಲನ್ನು ಅಧಿಕಾರಿಗಳು ತಮ್ಮ ತಾಬಾಕ್ಕೆ ತೆಗೆದುಕೊಂಡು ಎಂದು ಈ ಪಂಚ ಸಾಕ್ಷಿದಾರರು ಸಾಕ್ಷಿ ನುಡುದಿರುತ್ತಾರೆ.ಸದರಿ ಜಪ್ತಾದ ಮುದ್ದೇಮಾಲನ್ನು ಈಗ ನೋಡುತ್ತಿದ್ದು, ಅವುಗಳನ್ನು ಎಂಕೆ–01 ಮತ್ತು ದ್ವಿಚಕ್ರ ವಾಹನವನ್ನು ಎಂಓ–2 ಎಂದು ಗುರುತಿಸಿರುತ್ತಾರೆ. ಗುನ್ಹೆ ಘಟಿಸಿದ ಸ್ಥಳದಲ್ಲಿಯೇ ಮಾಲು ಜಪ್ತು ಪಂಚನಾಮೆಯನ್ನು ಸಮಯ ರಾತ್ರಿ 1–30 ರಿಂದ 2:30ರ ವರೆಗೆ ಟಾರ್ಚ ಬೆಳಕಿನಲ್ಲಿ ಬರೆಯಲಾಯಿತು ಸದರಿ ಪಂಚನಾಮೆಯನ್ನು ಈಗ ನೋಡುತ್ತಿದ್ದು ಅದರಲ್ಲಿ ಇರುವ ತಮ್ಮ ಸಹಿಯನ್ನು ನಿಶಾನೆ–ಪಿ–1 (ಬ) ಎಂದು ಗುರುತಿಸಿರುತ್ತಾರೆ. ಸದರಿ ಸಾಕ್ಷಿದಾರರ ಹೇಳಿಕೆಯ ಸಮಯದಲ್ಲಿ ವಾಹನ ಮಾಲೀಕರು ಹಾಜರ ಇಲ್ಲದಿರುವುದರಿಂದ ಯಾವುದೇ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿಲಾಯಿತು. ಈ ಪಂಚ ಸಾಕ್ಷಿದಾರನು ಅಭಿಯೋಗದ ಪರವಾಗಿ ಸಾಕ್ಷಿ ನುಡಿದಿದ್ದರಿಂದ ವಾಹನವು ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಮಾಡುವುದರಲ್ಲಿ ತೊಡಗಿರುವುದಕ್ಕೆ ಪುಷ್ಠಿ ನೀಡುತ್ತದೆ.

ವಾಹನ ಜಪ್ತಾದ ನಂತರ ವಾಹನ ಮಾಲೀಕರು ತಮ್ಮದೆಂದು ಯಾರು ಮುಂದೆ ಬಂದಿರುವುದಿಲ್ಲಾ ಸದರಿ ವಾಹನ ಮಾಲೀಕರ ಹೆಸರನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿಜಾಪೂರ ಇವರಿಂದ ಪಡೆದು ವಾಹನ ಮಾಲೀಕರಾದ ಶ್ರೀ ಚನ್ನಪ್ಪಾ ಮಲ್ಲಪ್ಪಾ ಕಾರಿಗಾರ ಇವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬ) ಕೆಳಗಡೆ ಕಾರಣ ಕೇಳುವ ನೋಟಿಸು ಜಾರಿಯಾಗಿದ್ದರು ಸಹ ಸದರಿ ವಾಹನ ಮಾಲೀಕರು ವಿಚಾರಣೆಗೆ ಹಾಜರಾಗಿರುವುದಿಲ್ಲಾ ಅಲ್ಲದೇ ತಮ್ಮ ಪರವಾಗಿ ಯಾರನ್ನೂ ಕಳುಹಿಸಿರುವುದಿಲ್ಲ ಮತ್ತು ಸದರಿ ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಬಂದು ವಾಹನ ತನ್ನದೆಂದು ಮಾಲಿಕತ್ವವನ್ನು ನಿರೂಪಿಸಿರುವುದಿಲ್ಲಾ.

**ಮೊದಲನೆಯ ವಿವಾದಾಂಶ :**

ದಿನಾಂಕ:7.8.2006 ರಂದು ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಯಾಗಿದೆಯೇ? ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32,24 ರೀತ್ಯಾ ಅಪರಾಧವಾಗಿದೆಯೇ? ಅಥವಾ ಇಲ್ಲಾ?

**ಎರಡನೇಯ ವಿವಾದಾಂಶ:**

ಸದರಿ ವಾಹನದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಯಾಗಿರುವ ಬಗ್ಗೆ ತನ್ನ ತಿಳುವಳಿಕೆಗೆ ಬಾರದೇ ಅಥವಾ ತಾನು ಶಾಮೀಲಾಗದೇ ನಡೆದಿದೆ ಎಂಬುದರ ಬಗ್ಗೆ ಅರ್ಜಿದಾರನಾಗಲೀ ಅಥವಾ ವಾಹನ ಚಾಲ್‌ಕರಾಗಲೀ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲಾ?

**ಮೂರನೇಯ ವಿವಾದಾಂಶ:**

ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಿಕ್ಕೆ ಯೋಗ್ಯವಾಗಿದೆಯೇ? ಅಥವಾ ಇಲ್ಲಾ?

ಮೊದಲನೆಯ ವಿವಾದಾಂಶಕ್ಕೆ ಉತ್ತರ–ಸಕಾರಾತ್ಮಕ (ಹೌದು)

ಪ್ರಾಶ್ಯೂಕೆಶನ್ ಸಾಕ್ಷಿ ನುಡಿದ ಪಿರ್ಯಾಧಿದಾರರು ನೀಡಿರುವ ಹೇಳಿಕೆಯನ್ನು ಗಮನಿಸಿದಾಗ ಮಹಜರದಲ್ಲಿ ಇರುವ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸುತ್ತಾರೆ. ಪಂಚರ ಸಾಕ್ಷಿಯು ಕೂಡಾ ಪಿರ್ಯಾಧಿಯ ಸಾಕ್ಷಿಗೆ ಪೂರಕವಾಗಿದೆ. ಪ್ರಕರಣದಲ್ಲಿ ಆರೋಪಿಸಿರುವ ಅಂಶವಾದ ಸದರಿ ವಾಹನದಲ್ಲಿ ಸಾಗಾಣಿಕೆ ಮಾಡಲ್ಪಟ್ಟಿದ್ದು ಕಳ್ಳಭಟ್ಟಿ ಸಾರಾಯಿ ಎಂಬುದು ರಸಾಯನಿಕ ವಿಶ್ಲೇಷಣೆಯ ವರದಿಯಿಂದ ದೃಢಪಟ್ಟಿರುತ್ತದೆ. ಸದರಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಗೆ ಸಂಬಂಧಪಟ್ಟ ದಾಖಲಾತಿಗಳು ವಾಹನದಲ್ಲಿ ಇಲ್ಲದಿರುವ ಅಂಶವನ್ನು ಗಮನಿಸಿದಾಗ ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತವಾಗಿದೆ.

ಎರಡನೇ ವಿವಾದಾಂಶಕ್ಕೆ ಉತ್ತರ ಇಲ್ಲಾ

ಮೊದಲನೆಯ ವಿವಾದಾಂಶದಿಂದ ಪಡೆದ ಉತ್ತರದಲ್ಲಿ ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದ್ದು, ಈ ಪ್ರಕರಣವು ಸಂಭವಿಸಿದ ಸಮಯದಲ್ಲಿ ಆರೋಪಿ ವಾಹನದ ಚಾಲಕನ ತಿಳುವಳಿಕೆಯಿಂದ ಹಾಗೂ ಈತನ ಶಾಮೀಲಿನಿಂದಲೇ ಸದರಿ ವಾಹನದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು. ಸ್ಪಷ್ಟವಾಗಿ ರುಜವಾತ ಆಗಿದ್ದು. ವಾಃನದ ಮಾಲೀಕನಿಂದ ಅಥವಾ ಸದರಿ ವಾಹನದ ಚಾಲಕನಿಂದಲೂ ಅವನು ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುತ್ತದೆ ಎಂಬುದು ಸಂದೇಹಾತೀತವಾಗಿ ರುಜುವಾತುವಾಗಿದೆ. ಇದನ್ನು ಅಲ್ಲಗಳೆಯಲು ವಾಹನ ಮಾಲಿಕನು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲಾ ಮತ್ತು ತನ್ನ ಪರ ಯಾವುದೇ ಸಾಕ್ಷ್ಯಾಧಾರಗಳನ್ನು ಸಹ ನೀಡಿರುವುದಿಲ್ಲಾ.

ನಿಯಮ 43 (ಬಿ) ರನ್ವಯ ಸ್ವತಃ ವಾಹನದ ಮಾಲಿಕ ಅಥವಾ ಅವರ ಪ್ರತಿನಿಧಿ ಮತ್ತು ಪ್ರತಿನಿಧಿ ಮತ್ತು ವಾಹನ ಯಾರ ವಶದಲ್ಲಿತ್ತೊ ಆತನು ವಿವರಗಳು ವಾಹನದಲ್ಲಿ ಮಧ್ಯ ಅಥವಾ ಅಮಲಿನ ಪದಾರ್ಥ ಸಾಗಾಣಿಕೆಯಾಗಿರುವುದರ ಬಗ್ಗೆ ತಮ್ಮಗಳ ಗಮನಕ್ಕೆ ಬಾರದೇ ಅಥವಾ ಶಾಮೀಲಾಗದೇ ಈ ಕೃತ್ಯವು ಸಂಭವಿಸಿದೆ. ಮತ್ತು ಇಂತಹ ಉಪಯೋಗದ ವಿರುದ್ಧ ತಾವು ಪ್ರತಿಯೊಬ್ಬರು ಎಲ್ಲ ರೀತಿಯ ಸಕಾರಣವಾದ ಮತ್ತು ಅಗತ್ಯವಾದ ಮಂಜೂರಾತಿಯನ್ನು ತೆಗೆದುಕೊಂಡಿರುವುದರ ಬಗ್ಗೆ ಅಧಿಕೃತ ಅಧಿಕಾರಿಗಳಿಗೆ ತೃಪ್ತಿಕರವಾಗಿ ಸಾಬೀತು ಪಡಿಸಬೇಕಾಗಿರುತ್ತದೆ. ಆದರೆ ವಾಹನ ಮಾಲೀಕರು ತಮ್ಮ ಹೇಳಿಕೆಯಿಂದಾಗಲೀ ಅಥವ ಸಾಕ್ಷ್ಯಾಧಾರಗಳಿಂದಾಗಲೀ ತಮ್ಮ ಹೊಣೆಗಾರಿಕೆಯನ್ನು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ಸಾಬೀತು ಪಡಿಸಿರುವುದಿಲ್ಲಾ.

ಮೂರನೇಯ ವಿವಾದಾಂಶಕ್ಕೆ ಉತ್ತರ–ಹೌದು–

ಮೊದಲನೆಯ ಮತ್ತು ಎರಡನೇಯ ವಿವಾದಾಂಶದಿಂದ ಪಡೆದ ಉತ್ತರದಿಂದ ಪ್ರಕರಣದಲ್ಲಿ ಜಪ್ತು ಮಾಡಪಲ್ಪಟ್ಟ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಂಡು ಬಂದಿರುವುದರಿಂದಾ ಈ ಕೆಳಕಂಡಂತೆ ಆದೇಶ.

**ಆದೇಶದ**

**ಸಂ:ಇಎಕಇ:ಬಿಜೆಪಿ:ಇಐಬಿ:ಡಿಟಿಸಿಆರ್:17/2006–07 ದಿನಾಂಕ: 24ನೇ ಫೆಬ್ರವರಿ 2007**

ಕೆ.ಆರ್. ಗೌಡ್ರ, ಪ್ರಾಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ ಬಿಜಾಪೂರ ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ 43 (ಸಿ) ಅನ್ವಯ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ ಇವರ ಮೊಕದ್ದಮೆ ಸಂಖ್ಯೆ:02/2006–07 ದಿನಾಂಕ:7.8.2006 ರಲ್ಲಿ ವಶಪಡಿಸಿಕೊಂಡಿರುವ ಹಿರೋ ಹೊಂಡಾ ಸಿ.ಬಿ.ಝಿ ದ್ವಿಚಕ್ರ ವಾಹನ ನಂ:ಕೆಎ–28–ಕೆ–8757 ನ್ನು 55 ಲೀಟರ ಕಳ್ಳಭಟ್ಟಿ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದ್ದೇನೆ.

ಮೇಲೆ ತಿಳಿಸಿದ 55 ಲೀಟರ ಕಳ್ಳಭಟ್ಟಿ ಸಾರಾಯಿಯನ್ನು ಅಬಕಾರಿ ಉಪ ಅಧೀಕ್ಷಕರು ಬಿಜಾಪೂರ ಉಪ ವಿಭಾಗ ಇವರ ಸಮಕ್ಷಮ (ಶ್ಯಾಂಪಲ ಬಾಟಲಿಗಳನ್ನು ಹೊರತುಪಡಿಸಿ) ನಾಶಪಡಿಸಲು ಆದೇಶಿಸಿದೆ.

ಈ ಆದೇಶವನ್ನು ಇಂದು ದಿನಾಂಕ: 24.2.2007 ರಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚಿಸಿ ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಿದೆ.

**ಕೆ.ಆರ್. ಗೌಡ್ರ**

ಅಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ

ಬಿಜಾಪೂರ ಜಿಲ್ಲೆ, ಬಿಜಾಪೂರ.

ಅನುಬಂಧ–(1)

ಪಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

| | | |
|---|---|---|
| ಪ್ರಾ.ಸಾ. 1– | ವಿಶ್ವನಾಥ ವಾಯ್, ಎಸ್.<br>ಅಬಕಾರಿ ಉಪ ನಿರೀಕ್ಷಕರು ಬಿಜಾಪೂರ ಕಛೇರಿ ಜಾರಿ ಮತ್ತು ತನಿಖೆ | ತನಿಖಾಧಿಕಾರಿ |
| ಪ್ರಾ.ಸಾ. 2 | ಸುರೇಶ ತಂದೆ ಬಾಬುರಾವ ಗರುಡಕರ<br>ವಯಸ್ಸು–42 ಜಾ–ಗೊಂದಲಗೇರ, ಉ–ಕೂಲಿ, ಸಾ: ಬಿಜಾಪೂರ. | ಪಂಚಕರು |

ಅನುಬಂಧ–(2)

**ಫಿರ್ಯಾಧಿದಾರರ ಪರ ಮಂಡಿಸಲಾದ ದಾಖಲಾತಿಗಳು**

| | |
|---|---|
| ನಿಶಾನೆ ಪಿ–1 | ಪಂಚನಾಮೆ |
| ನಿಶಾನ-ಪಿ1(ಎ) | ಪ್ರಾ ಸಾ–1 ರವರ ಸಹಿ |
| ನಿಶಾನೆ–ಪಿ–2 | ಪ್ರಥಮ ವರ್ತಮಾನ ವರದಿ |
| ನಿಶಾನೆ–ಪಿ–2(ಎ) | ಪ್ರಾ.ಸಾ–1 ರವರ ಸಹಿ |
| ನಿಶಾನೆ–ಪಿ–3 | ರಸಾಯನಿಕ ತಜ್ಞರ ವರದಿ |
| ನಿಶನೆ–ಪಿ–1(ಬಿ) | ಪ್ರಾ.ಸಾ–2 ರವರ ಸಹಿ |

ಅನುಬಂಧ–(3)

**ಪೀರ್ಯಾಧಿದಾರರ ಪರ ಗುರುತಿಸಲಾದ ವಸ್ತುಗಳು**

1) ಎಂ.ಓ–1 ಮಾದರಿ ಕಳ್ಳಭಟ್ಟಿ ಸಾರಾಯಿ ಪಾಕೀಟಗಳು

2) ಎಂ.ಓ–01 ಸುಜುಕಿ ದ್ವಿಚಕ್ರ ವಾಹನ ನಂ.ಕೆಎ–28–ಕೆ–8757

ಅನುಬಂಧ–(4)

ವಾಹನದ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು

ಇಲ್ಲಾ

ಅನುಬಂಧ–(5)

ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು

ಇಲ್ಲಾ

**ಕೆ.ಆರ್. ಗೌಡ್ರ**

ಪಿ.ಆರ್. 327

ಅಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ಇ.ಐ.ಬಿ ಬಿಜಾಪೂರ ಜಿಲ್ಲೆ, ಬಿಜಾಪೂರ.

**ಅಧೀಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ:18/96–97 ದಿ:21ನೇ ಏಪ್ರಿಲ್ 2007**

| | |
|---|---|
| **ಉಪಸ್ಥಿತರು :** | ಶ್ರೀ ಜಿ. ಜಯರಾಮಯ್ಯ ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ |
| **ಪಿರ್ಯಾಧಿದಾರರು** | ವಲಯ ಅರಣ್ಯಾಧಿಕಾರಿ, ನಗರ ವಲಯ, ನಗರ (ಸಹಾಯಕ ಸರ್ಕಾರಿ ಅಭಿಯೋಜಕರು) |
| **ಭಾಧ್ಯತೆದಾರರು** | 1) ಆರ್.ಸಿ. ಮಾಲೀಕರು<br>ಶ್ರೀ ಬಾಬುರಾಜನ್ ಬಿನ್ ಸುಕುಮಾರನ್, ಮುಲಿಂಜ್, ಸುಪ್ರಿಯ ಟಾಕೀಸ್ ಹತ್ತಿರ, ಉಪ್ಪಾಲ ಅಂಚೆ, ಕಾಸರಗೋಡು ಜಿಲ್ಲೆ, ಕೇರಳ ರಾಜ್ಯ<br>2) ಫೈನಾನ್ಸಿಯರ್<br>ಶ್ರೀ ಉತ್ತಮಚಂದ ಸಿಸೋಡಿಯ<br>20, ಚಂದ್ರಪ್ಪ ಮುದಲಿ ಸ್ಟ್ರೀಟ್, ಸೌಕಾರ್ ಪೇಟೆ ಮದ್ರಾಸ್–600079 ಇವರ ಜಿಪಿಎ. ದಾರರಾದ ಶ್ರೀ ಎಂ.ಪಿ ನಾರಾಯಣ ಬಿನ್ ಟಿ. ಕನ್ನನ್ ನಾಯರ್, C/o ಆಂಜನೇಯ ಮೋಟಾರ್ ಡ್ರೈವಿಂಗ್ ಶಾಲೆ ಎಂ.ಜಿ. ರಸ್ತೆ ,ಕಾಸರಗೋಡು (ಟಿ.ಬಿ. ಮಂಜುನಾಥ ಶೆಟ್ಟಿ) |

**ಪ್ರಸ್ತಾವನೆ:**

ದಿನಾಂಕ:8.7.1996ರಂದು ನಗರ ವಲಯದ ನಿಟ್ಟೂರು ಗಸ್ತಿನ ಅರಣ್ಯ ರಕ್ಷಕರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ನಾಗೋಡಿ, ಬ್ಯಾಡಗೋಡು, ಇಕ್ಕಿಬೀಡು, ಗ್ರಾಮಸ್ಥರೊಂದಿಗೆ ಹೊಸನಗರ ತಾಲ್ಲೂಕು ಕಸಬಾ ಹೋಬಳಿ ನಾಗೋಡಿ

ಗ್ರಾಮದ ಕಾರೇಘಟ್ಟದ ಸಮೀಪ ರಾತ್ರಿ ಕಾಯುತ್ತಿರುವಾಗ ಸುಮಾರು 6–10 ರ ಸಮಯದಲ್ಲಿ ಒಂದು ವಾಹನ ನಾಗೋಡಿಯಿಂದ ಕೊಲ್ಲೂರಿಗೆ ಹೋಗುವ ರಸ್ತೆ ಕಡೆ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದರೂ ನಿಲ್ಲಿಸದೆ ಮುಂದೆ ವೇಗವಾಗಿ ಹೋಯಿತು. ನಂತರ ಈ ವಾಹನವನ್ನು ಬೆನ್ನಟ್ಟಿ 1/2 ಕಿ.ಮೀ ದೂರ ಹೋದಾಗ ವಾಹನವನ್ನು ರಸ್ತೆಪಕ್ಕದಲ್ಲಿ ನಿಲ್ಲಿಸಿ ವಾಹನದಲ್ಲಿದ್ದ ಅಸಾಮಿಗಳು ಕಾರಿನಿಂದ ಇಳಿದು ಪರಾರಿಯಾದರು ಓಡಿಹೋದರು (1) ಸೋಮ ಬಿನ್ ನಾರಾಯಣ, (2) ಸಾಜಿ ಬಿನ್ ಸೋಮ (3) ಮಧು ಬಿನ್ ಮ್ಯಾಥ್ಯೂ (4) ಸುರೇಶ ಬಿನ್ ಮ್ಯಾಥ್ಯೂ ಇವರೆಲ್ಲ ಮರಾಠಿ ಗ್ರಾಮಕ್ಕೆ ಸೇರಿದ ಅಸಗೋಡು ಮತ್ತು ಕಲಿಜೆಡ್ ವಾಸದವರಾಗಿದ್ದು, ಇವರು ಮೂಲತಃ ಕೇರಳದವರು ಎಂದು ಗ್ರಾಮಸ್ಥರು ಗುರುತಿಸಿರುತ್ತಾರೆ. ನಂತರ ವಾಹನವನ್ನು ಪರಿಶೀಲಿಸಿ.ನೋಡಲಾಗಿ ಬಿಳಿ ಬಣ್ಣದ ಡೀಸೆಲ್ ಅಂಬಾಸಿಡರ್ ಕಾರ್ ನಂ:ಕೆಎಲ್–13–ಎ–3885, ಇಂಜಿನ್ ನೋ:ODH 54321, ಛಾಸ್ಸಿಸ್ ನಂ III 463392 ಆಗಿದ್ದು, ವಾಹನದೊಳಗಡೆ ಮತ್ತು ಡಿಕ್ಕಿಯಲ್ಲಿ ಶ್ರೀಗಂಧದ ಬೇರು ಮತ್ತು 18 ತುಂಡುಗಳನ್ನು ತುಂಬಿದ್ದರು. ಈ ಶ್ರೀಗಂಧದ ತುಂಡುಗಳನ್ನು ಕೊಡಲಿ ಗರಗಸದಿಂದ ಕೊಯ್ತು ಮಾಡಿದ್ದಾಗಿರುತ್ತದೆ ಇವುಗಳ ಒಟ್ಟು ತೂಕ 120 ಕೆ.ಜಿ. ಇದ್ದು ಈ ತುಂಡುಗಳ ಮೇಲೆ ಯಾವುದೇ ಇಲಾಖಾ ಛಾಪಾದ ಗುರುತಾಗಲಿ ಇರಲಿಲ್ಲ ಅಲ್ಲದೇ ಇಲಾಖೆಯವರನ್ನು ನೋಡಿದ ತಕ್ಷಣ ಕಾರನ್ನು ಬಿಟ್ಟು ಓಡಿ ಹೋಗಿ ಪರಾರಿಯಾಗಿರುವುದರಿಂದ ಇದು ಸರ್ಕಾರಿ ಕಾಡಿನಿಂದ ಅಕ್ರಮವಾಗಿ ತಂದದ್ದೆಂದು ಪರಿಗಣಿಸಿ, ವಾಹನ ಮತ್ತು ಶ್ರೀಗಂಧವನ್ನು ಪ್ರಥಮ ವರ್ತಮಾನ ವರದಿ ಮತ್ತು ಮಹಜರ್‌ನೊಂದಿಗೆ ಇಲಾಖಾ ಪರ ಜಪ್ತು ಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 84,86,87 ಹಾಗೂ 71(ಎ) ಪ್ರಕಾರ ನಗರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:31/96–97ನ್ನು ದಾಖಲಿಸಿ ನಂತರ ವಾಹನ ಮತ್ತು ಶ್ರೀಗಂಧವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ವಾಹನವನ್ನು ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ನಂತರ ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಈ ನ್ಯಾಯಾಲಯದಿಂದ ದಿ:8.8.96 ರಂದು ರಿಜನಲ್ ಟ್ರಾನ್ಸ್‌ಪೋರ್ಟ್ ಆಫೀಸರ್, ಕಾಸರಗೋಡು ಕೇರಳ ರಾಜ್ಯ ಇವರಿಗೆ ಪತ್ರ ಬರೆಯಲಾಯಿತು. ಅದರಂತೆ ಈ ವಾಹನವು ಶ್ರೀ ಬಾಬುರಾಜನ್ ಬಿನ್ ಸುಕುಮಾರನ್, ಮಾಲೀಂಜ್, ಸುಪ್ರಿಯ ಟಾಕೀಸ್ ಹತ್ತಿರ ಉಪ್ಪಾಲ ಅಂಚೆ, ಕಾಸರಗೋಡು ಇವರ ಹೆಸರಿಗೆ ನೋಂದಣಿಯಾಗಿರುತ್ತದೆ. ಅದರಂತೆ ದಿ:31.8.96ರಂದು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71 (ಬಿ)(1) ರ ಪ್ರಕಾರ ಕಾರಣ ಕೇಳಿ ಪತ್ರ ಜಾರಿ ಮಾಡಿ, ಈ ವಾಹನ ಕೆಎಲ್–13 ಎ–3885 ಅಂಬಾಸಿಡರ್ ಕಾರ್ ಆಗಿದ್ದು, ಈ ಕಾರಿನಲ್ಲಿ ಶ್ರೀಗಂಧ 120 ಕೆ.ಜಿ. ಅಕ್ರಮ ಸಾಗಾಣಿಕೆ ಮಾಡಿದ್ದರಿಂದ ವಲಯ ಅರಣ್ಯಾಧಿಕಾರಿ, ನಗರ ಇವರು ಕೇಸು ದಾಖಲಿಸಿ ಈ ನ್ಯಾಯಾಲಯದ ಮುಂದೆ ಹಾಜರುಪಡಿಸಿರುತ್ತಾರೆ. ಈ ವಾಹನದ ದಾಖಲಾತಿಗಳನ್ನು ಈ ನ್ಯಾಯಾಲಯಕ್ಕೆ ಈ ಪತ್ರ ತಲುಪಿದ 15 ದಿಸದೊಳಗೆ ಹಾಜರುಪಡಿಸಲು ಒಂದು ವೇಳೆ ನಿಗದಿತ ಸಮಯದೊಳಗೆ ದಾಖಲೆ ಹಾಜರುಪಡಿಸದೇ ಹೋದಲ್ಲಿ ನಿಮ್ಮ ತಕರಾರು ಏನೂ ಇಲ್ಲವೆಂದು ಪರಿಗಣಿಸಿ ವಾಹನ ಮತ್ತು ಶ್ರೀಗಂಧವನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಎಂದು ತಿಳಿಸಲಾಗಿದೆ.

ಈ ವಾಹನವನ್ನು ಬಿಡುಗಡೆ ಮಾಡುವಂತೆ ಉತ್ತಮಚಂದ್ ಸಿಸೋಡಿಯ, ಫೈನಾನ್ಸ್, 20 ಚಂದ್ರಪ್ಪ, ಮುದವಿ ಸ್ಟ್ರೀಟ್, ಸೌಕಾರ್ ಪೇಟೆ, ಮದ್ರಾಸ್ ಇವರ ಜಿ.ಪಿ.ಎ. ದಾರರಾದ ಶ್ರೀ ಎಂ.ಪಿ. ನಾರಾಯಣ್ ಬಿನ್ ಟಿ. ಕನ್ನನ್ ನಾಯರ್, C/o ಆಂಜನೇಯ ಮೋಟಾರ್ ಡ್ರೈವಿಂಗ್ ಶಾಲೆ ಎಂ.ಜಿ. ರಸ್ತೆ, ಕಾಸರಗೋಡು ಇವರು ದಿ:18.9.96ರಂದು ಈ ನ್ಯಾಯಾಲಯಕ್ಕೆ ವಲೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. ಇವರಿಗೂ ಸಹ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ದಿ:5.5.97ರಂದು ಕಾರಣ ಕೇಳಿ ಪತ್ರ ಜಾರಿ ಮಾಡಿದೆ. ಮತ್ತು ಶ್ರೀ ಬಾಬುರಾಜನ್ ಬಿನ್ ಸುಕುಮಾರನ್, ಬಾಮ ನಿವಾಸ, ಉಪ್ಪಾಲ ಅಂಚೆ, ಕಾಸರಗೋಡು ಜಿಲ್ಲೆ ಇವರು ವಕೀಲರ ಮುಖಾಂತರ ದಿ:3.5.1997ರಂದು ಈ ನ್ಯಾಯಾಲಯಕ್ಕೆ ಮನವಿ ಸಲ್ಲಿಸಿ ವಾಹನ ಬಿಟ್ಟುಕೊಡುವಂತೆ ಕೋರಿರುತ್ತಾರೆ.

ದಿ:23.7.99ರಂದು ಸಮನ್ಸನ್ನು ಶ್ರೀ ಬಾಬುರಾಜುವಿಗೆ ಜಾರಿಮಾಡಿ ದಿ:31.7.99ರಂದು ಬೆಳಿಗ್ಗೆ 11–00 ಗಂಟೆಗೆ ಈ ನ್ಯಾಯಾಲಯಕ್ಕೆ ಹಾಜರಾಗಲು ಅಂಚೆ ಮೂಲಕ ಕಳುಹಿಸಿದ್ದು, ಲಕೋಟೆಯ ಮೇಲೆ ಅಂಚೆ ಇಲಾಖೆಯವರು ಈ ಪತ್ರ ಪಾರ್ಟಿ ತಿರಸ್ಕರಿಸಿರುತ್ತಾರೆಂದು ನಮೂದಿಸಿ ಈ ನ್ಯಾಯಾಲಯಕ್ಕೆ ಹಿಂದಿರುಗಿಸಿರುತ್ತಾರೆ.

ಪ್ರಾಸಿಕ್ಯೂಷನ್ ಸಾಕ್ಷಿ 1 ಶ್ರೀ ಪುಟ್ಟಸ್ವಾಮಿ, ಅರಣ್ಯ ರಕ್ಷಕ ಇವರನ್ನು ದಿ:27.6.1998ರಂದು ಮತ್ತು ಪಿಡಬ್ಲ್ಯೂ–2 ದಿ:25.7.98 ರಂದು ಶ್ರೀ ಗೋಪಾಲ ಇವರನ್ನು ಸಹಾಯಕ ಸರ್ಕಾರಿ ಅಭಿಯೋಜಕರು ಮುಖ್ಯ ವಿಚಾರಣೆ ಖಚಿತ ವರ್ತಮಾನದ ಮೇರೆಗೆ ತಾರೆಘಟ್ಟದ ಸಮೀಪದಲ್ಲಿ ಕಾಯುತ್ತಿರುವಾಗ ನಾಗೋಡಿ ಕಡೆಯಿಂದ ಒಂದು ವಾಹನ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದರೂ ನಿಲ್ಲಸದೆ ಮುಂದೆ ಹೋದಾಗ ಅನುಮಾನದಿಂದ ಬೆನ್ನಟ್ಟಿ ½ ಕಿ.ಮೀ. ದೂರದಲ್ಲಿ ಹಿಡಿದೆವು. ಅಸಾಮಿಗಳು ಕೈಗೆ ಸ್ಸಿಗದೆ ಪರಾರಿಯಾದರು. ಕಾರಿನೊಳಗೆ ಶ್ರೀಗಂಧದ ತುಂಡು, ಬೇರು ಚಕ್ಕೆ ಇತ್ತು ಇವುಗಳನ್ನು ಸಾಗಿಸಲು ರಹದಾರಿ ಇರಲಿಲ್ಲ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಮಹಜರ್ ನಿಪಿ–1 ಇದು 1ಎ ನನ್ನ ಸಹಿ ಇದೆ. ಕಾರಿನಲ್ಲಿ ಶ್ರೀಗಂಧ ಕಳ್ಳಸಾಗಾಣಿಕೆಗೆ ಉಪಯೋಗಿಸಿದ್ದರಿಂದ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು

ವಿನಂತಿಸಿರುತ್ತಾರೆ. ಪಾಟಿ ಸವಾಲು ದಿ:28.7.2001ರಂದು ಟಿಬಿಎಂ ವಕೀಲರಿಂದ 4 ಜನ ಓಡಿಹೋದರು, ಅವರು ಈ ಹಿಂದೆ ಮಾರುತಿ ಕಾರಿನಲ್ಲಿ ಕಳ್ಳಸಾಗಾಣಿಕೆ ಮಾಡಿದವರೆಂದು ಗ್ರಾಮಸ್ಥರು ಊಹಿಸಿರುತ್ತಾರೆ. ಅವರು ಮರಾಠಿ ಗ್ರಾಮದವರೆಂದು, ಬಾಬುರಾಜನ್ ರವರಿಗೆ ಈ ವಾಹನ ಸೇರಿದ್ದೆಂದು, ಉಪ್ಪಾಲ ಕಾಸರಗೋಡಿಗೆ ಸೇರಿದ್ದೆಂದು ನನಗೆ ಗೊತ್ತಿಲ್ಲ. ದಿ:7.7.96ರಂದು ವಾಹನ ಕಳ್ಳತನವಾದ ಬಗ್ಗೆ ಪೋಲಿಸರಿಗೆ ಠಾಣೆಯಲ್ಲಿ ದೂರು ನೀಡಿದ ಬಗ್ಗೆ ನನಗೆ ಗೊತ್ತಿಲ್ಲ.

ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ದಿ:23.9.06, 28.10–16,02.12.06, 06.1.07, 24.2.07, 3.3.07, 24.3.07 ರಂದು 7 ಬಾರಿ ದಿನಾಂಕ ನಿಗದಿ ಪಡಿಸಿದ್ದು, ಈ ದಿನಗಳಂದು ವಾಹನ ಮಾಲೀಕರು ಈ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ ಇದರಿಂದ ಈ ವಾಹನದ ವಿಚಾರಣೆಗೆ ಹಾಜರಾಗಲು ವಾಹನ ಮಾಲೀಕರಿಗೆ ಆಸಕ್ತಿ ಇಲ್ಲವೆಂದು ಕಂಡುಬಂದದು ಡಿಫೆನ್ಸ್ ಸಾಕ್ಷಿ ಹೇಳಿಕೆ ಇಲ್ಲವೆಂದು ಪರಿಗಣಿಸಿದೆ.

ದಿ:3.3.07 ಮತ್ತು 24.3.07 ರಂದು ಈ ಪ್ರಕರಣದಲ್ಲಿ ವಾದ ಮಂಡಿಸಲು ಡಿಫೆನ್ಸ್ ಕಡೆಯಿಂದ ಯಾರೂ ಹಾಜರಾಗದೇ ಇದ್ದುದರಿಂದ ಡಿಫೆನ್ಸ್ ಕಡೆಯ ವಾದ ಏನೂ ಇಲ್ಲವೆಂದು ಪರಿಗಣಿಸಲಾಯಿತು.

ದಿ:24.3.2007ರಂದು ಸಹಾಯಕ ಸರ್ಕಾರಿ ಅಭಿಯೋಜಕರು ವಾದ ಮಂಡಿಸಿ, ಈ ವಾಹನದಲ್ಲಿ ಶ್ರೀಗಂಧವನ್ನು ಅಕ್ರಮ ಸಾಗಿಸಿದ ಬಗ್ಗೆ ವಾಹನ ಮತ್ತು ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ನಗರ ಇವರು ಇಲಾಖಾ ಪರ ಜಪ್ತಿಮಾಡಿ, ಈ ಬಗ್ಗೆ ಪ್ರಥಮ ವರ್ತಮಾನ ವರದಿ ಸೀಜ್ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ ಆದರೆ ವಾಹನ ಮಾಲೀಕರು ಮತ್ತು ಇವರ ವಕೀಲರು ಈ ಘಟನೆ ನಡೆದ ಬಳಿಕ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇವರ ಹೇಳಿಕೆಯಲ್ಲಿ ಯಾವುದೇ ಸತ್ಯಾಂಶವಿರುವುದಿಲ್ಲ. ಈ ವಾಹನದಲ್ಲಿ ಶ್ರೀಗಂಧ ಅಕ್ರಮವಾಗಿ ಸಾಗಿಸಿರುವುದು ಪ್ರಾಸಿಕ್ಯೂಷನ್ ಸಾಕ್ಷಿಯ ಹೇಳಿಕೆಯಿಂದ ಸಾಬೀತಾಗಿರುತ್ತದೆ. ಆದ್ದರಿಂದ ವಾಹನವನ್ನು ಶ್ರೀಗಂಧದ ಸಮೇತ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತವಂಶ ಮತ್ತು ಕಾನೂನಿನ ವಸ್ತುಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಾಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1. ಅರ್ಜಿದಾರರು ಅಂಬಾಸಿಡರ್ ಕಾರ್ ನಂ:ಕೆಎಲ್–13–ಎ–3885 ರಲ್ಲಿ 120 ಕೆ..ಜಿ. ಶ್ರೀಗಂಧವನ್ನು ದಿ:8.7.1996ರಂದು ಕಾನೂನಿನ ವಿರುದ್ದವಾಗಿ ಸಾಗಿಸಲು ಉಪಯೋಗಿಸಲಾಗಿತ್ತೆ ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ಕೆಲಗಾರರು ಅಥವಾ ಅವರ ಪ್ರತಿನಿಧಿಗಳು ಕಾರಿನಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಶ್ರೀಗಂಧವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ ಹಾಗೂ ಈ ವಾಹನದ ಮಾಲೀಕರ ಅಥವಾ ಅವರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ ಈ ವಾಹನದ ಮಾಲೀಕರ ಅಥವಾ ಅವರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ. ಈ ವಾಹನವನ್ನು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆ ಉಪಯೋಗಿಸಲಾಗಿದೆಯೇ, ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದು ಅಂಶಕ್ಕೆ ಹೌದು ಎಂತಲೂ

2. ಎರಡನೇ ಅಂಶಕ್ಕೆ ಹೌದು ಎಂತಲೂ

3. ಮೂರನೇ ಅಂಶದ ಮೊದಲಿನ ಭಾಗದ ಪ್ರಶ್ನೆಗೆ ಹೌದು ಎಂದು, ಎರಡನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.

**ಅಂಶ–1:**

ದಿ:8.7.1996ರಂದು ನಗರ ವಲಯದ ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಕಾರೇಘಟ್ಟದ ಹತ್ತಿರ ಕಾಯುತ್ತಿರುವಾಗ ನಾಗೋಡಿ ಹತ್ತಿರ ಒಂದು ಅಂಬಾಸಿಡರ್ ಕಾರ್ ಕೆಎಲ್–13–ಎ–3885 ಬರುತ್ತಿದ್ದು, ನಿಲ್ಲಿಸಲು ಸೂಚಿಸಿದರೂ ನಿಲ್ಲಿಸದೆ ಮುಂದೆ ಹೋಗಿ ಕಾರನ್ನು ರಸ್ತೆ ಪಕ್ಕದಲ್ಲಿ ನಿಲ್ಲಿಸಿ ಅಸಾಮಿಗಳು ಓಡಿ ಪರಾರಿಯಾಗಿದ್ದು, ವಾಹನದಲ್ಲಿ ಶ್ರೀಗಂದದ ತುಂಡು, ಬೇರು, ಚಕ್ಕೆ ಇದ್ದು ಅವುಗಳನ್ನು ಸಾಗಿಸಲು ರಹದಾರಿ ಇರಲಿಲ್ಲ ಮತ್ತು ಅವುಗಳನ್ನು ಗರಗಸದಿಂದ, ಕೊಡಲಿಯಿಂದ ಕಡಿದ ತುಂಡುಗಳಾಗಿದ್ದು, ಯಾವುದೇ ಇಲಾಖಾ ಛಾಪಾವಿರಲಿಲ್ಲ ಅಲ್ಲದೆ ಇಲಾಖೆಯವರನ್ನು ನೋಡಿದ ತಕ್ಷಣ ಕಾರನ್ನು ಬಿಟ್ಟು ಅಸಾಮಿಗಳು ಓಡಿ ಹೋಗಿರುತ್ತಾರೆ. ಈ ಬಗ್ಗೆ ಪಂಚನಾಮೆಯಲ್ಲಿ ಸಾಕ್ಷಿ ಸಹಿಯೊಂದಿಗೆ ಪ್ರಥಮ

ವರ್ತಮಾನ ವರದಿ, ಜಪ್ತವರದಿ ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ ಹಾಗೂ ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ, ಈ ನ್ಯಾಯಾಲಯಕ್ಕೆ ಹಾಜರುಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ಹೋಲಿಕೆ ಇರುತ್ತದೆ. ಇದರಿಂದ ಈ ವಾಹನವನ್ನು ಶ್ರೀಗಂಧವನ್ನು ಕಳ್ಳಸಾಗಾಣಿಕೆ ಮಾಡಲು ಉಪಯೋಗಿಸಿರುವುದು ಸಾಬೀತಾಗಿದೆ. ಆದ್ದರಿಂದ ಈ ಅಂಶಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ–2**

ವಾಹನ ಮಾಲೀಕರಾದ ಶ್ರೀ ಬಾಬು ರಾಜನ್ ಬಿನ್ ಸುಕುಮಾರನ್, ಮುಲಿಂಜ್, ಸುಪ್ರಿಯ ಟಾಕೀಸ್ ಹತ್ತಿರ, ಉಪ್ಪಾಲ ಅಂಚೆ, ಕಾಸರಗೋಡು ಜಿಲ್ಲೆ, ಕೇರಳ ರಾಜ್ಯ ಇವರು ದಿ:23.7.1996ರಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ. ರಿಜನಲ್ ಟ್ರಾನ್ಸ್‌ಪೋರ್ಟ್ ಆಫೀಸರ್, ಕಾಸರಗೋಡು ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಬಿ ಪ್ರತಿಯ ಆಧಾರದ ಮೇಲೆ ಆರ್.ಸಿ. ಮಾಲೀಕರಿಗೆ ದಿ:31.8.1996ರಂದು ಮತ್ತು ಫೈನಾನ್ಸರ್‌ಗೆ ದಿ:5.5.1997ರಂದು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ಕಾರಣ ಕೇಳಿ ಪತ್ರ ಜಾರಿಮಾಡಿರುತ್ತದೆ. ಡಿಫೆನ್ಸ್ ಕಡೆಯವರಿಗೆ ಹೇಳಿಕೆ ಪಡೆಯಲು 7 ಬಾರಿ ಅವಕಾಶ ನೀಡಿ ಮತ್ತು ಡಿಫೆನ್ಸ್ ಕಡೆ ವಾದ ಮಂಡಿಸಲು 2 ಬಾರಿ ಅವಕಾಶ ನೀಡಿದರೂ ಡಿಫೆನ್ಸ್ ಕಡೆಯವರು ಹಾಜರಾಗಿರುವುದಿಲ್ಲ. ಅವರ ಅಹವಾಲು ಮಂಡಿಸಲು ಬಹಳಷ್ಟು ಕಾಲಾವಕಾಶ ನೀಡಿದೆ. ಆದ್ದರಿಂದ ಇದಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ–3**

ದಿ:8.7.1996ರಂದು ನಗರ ವಲಯದ ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಕಾರೇಘಟ್ಟದ ಹತ್ತಿರ ಕಾಯುತ್ತಿರುವಾಗ ನಾಗೋಡಿ ಹತ್ತಿರ ಒಂದು ಅಂಬಾಸಿಡರ್ ಕಾರ್ ಕೆಎಲ್–13–ಎ–3885 ಬರುತ್ತಿದ್ದು, ನಿಲ್ಲಿಸಲು ಸೂಚಿಸಿದರೂ ನಿಲ್ಲಿಸದೆ ಮುಂದೆ ಹೋಗಿ ಕಾರನ್ನು ರಸ್ತೆ ಪಕ್ಕದಲ್ಲಿ ನಿಲ್ಲಿಸಿ ಅಸಾಮಿಗಳು ಓಡಿ ಪರಾರಿಯಾಗಿದ್ದ, ವಾಹನದಲ್ಲಿ ಶ್ರೀಗಂಧದ ತುಂಡು, ಬೇರು, ಚಕ್ಕೆ ಇದ್ದು ಅವುಗಳನ್ನು ಸಾಗಿಸಲು ರಹದಾರಿ ಇರಲಿಲ್ಲ ಮತ್ತು ಅವುಗಳನ್ನು ಗರಗಸದಿಂದ, ಕೊಡಲಿಯಿಂದ ಕಡಿದ ತುಂಡುಗಳಾಗಿದ್ದು, ಯಾವುದೇ ಇಲಾಖಾ ಛಾಪಾವಿರಲಿಲ್ಲ. ಅಲ್ಲದೆ ಇಲಾಖೆಯವರನ್ನು ನೋಡಿದ ತಕ್ಷಣ ಕಾರನ್ನು ಬಿಟ್ಟು ಅಸಾಮಿಗಳು ಓಡಿ ಹೋಗಿರುತ್ತಾರೆ. ಈ ಬಗ್ಗೆ ಪಂಚನಾಮೆಯಲ್ಲಿ ಸಾಕ್ಷಿ ಸಹಿಯೊಂದಿಗೆ ಪ್ರಥಮ ವರ್ತಮಾನ ವರದಿ, ಜಪ್ತುವರದಿ, ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ಅಲ್ಲದೇ ಪ್ರಾಸಿಕ್ಯೂಷನ್ ಕಡೆ ಸಾಕ್ಷಿಯ ಹೇಳಿಕೆಗೂ, ಈ ನ್ಯಾಯಾಲಯಕ್ಕೆ ಸಲ್ಲಿಸಿದ ದಾಖಲೆಗಳಿಗೂ ಒಂದಕ್ಕೊಂದು ಹೋಲಿಕೆ ಇರುತ್ತದೆ ಆದರೆ ಡಿಫೆನ್ಸ್ ಕಡೆಯವರು ದಿ:23.7.1996ರಂದು ಈ ನ್ಯಾಯಾಲಯಕ್ಕೆ ಮನವಿ ಅರ್ಜಿ ಸಲ್ಲಿಸಿ, ವಾಹನವನ್ನು ಬಿಟ್ಟುಕೊಡಲು ಕೋರಿರುತ್ತಾರೆ. ಸದರಿ ಅರ್ಜಿಯಲ್ಲಿ ದಿ:7.7.96ರಂದು ವಾಹನ ಕಳ್ಳತನವಾದ ಬಗ್ಗೆ ಮಂಜೇಶ್ವರ ಪೋಲಿಸ್ ಠಾಣೆಗೆ ದಿ:8.7.96ರಂದು ಅರ್ಜಿ ಸಲ್ಲಿಸಿರುತ್ತೇನೆಂದು ತಿಳಿಸಿರುತ್ತಾರೆ. ಆದರೆ ಈ ವಾಹನದ ವಿಚಾರಣಾ ಕಾಲದಲ್ಲಿ ಯಾವುದೇ ಸಾಕ್ಷ್ಯಾಧಾರಗಳನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ,. ಆದ್ದರಿಂದ ಈ ವಾಹನವನ್ನು ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆಗೆ ವಾಹನ ಮಾಲೀಕರು ಉಪಯೋಗಿಸಿರುವುದು ಸಾಬೀತಾಗಿದೆ. ಆದ್ದರಿಂದ ಈ ಅಂಶದ ಮೊದಲ ಭಾಗಕ್ಕೆ ಹೌದು ಎಂದೂ, ಎರಡನೇ ಭಾಗಕ್ಕೆ ಇಲ್ಲ ಎಂದು ನನ್ನ ಉತ್ತರವಾಗಿದೆ.

**ಅಂಶ–4**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶ ನೀಡಬಯಸುತ್ತೇನೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧೀಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ವಲಯ ಅರಣ್ಯಾಧಿಕಾರಿ ನಗರ ಇವರು ಜಪ್ತು ಮಾಡಿದ ಅಂಬಾಸಿಡರ್ ಕಾರ್ ಕೆಎಲ್–13–ಎ–3885, ಇಂಜಿನ್ ನಂ ODH 54321, ಛಾಸ್ಸಿಸ್ ನಂ III: 463392 ಮತ್ತು ಈ ವಾಹನದಲ್ಲಿದ್ದ ಶ್ರೀಗಂಧದ ತುಂಡು, ಬೇರು, ಚಕ್ಕೆ ಸೇರಿದಂತೆ ತೂಕ 250ಕೆ.ಜಿ ಯು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮತ್ತು ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಸರ್ಕಾರಕ್ಕೆ ಅನುಕೂಲಕರವಾದ ರೀತಿಯಲ್ಲಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶ ತೆರೆದ ನ್ಯಾಯಾಲಯದಲ್ಲಿ ನನ್ನ ಉಕ್ತಲೇಖದಲ್ಲಿ ಬರೆಯಿಸಿ ಗಣಕ ಯುಂತ್ರದಲ್ಲಿ ಮುದ್ರಿಸಿ ಸರಿಪಡಿಸಿ ದಿ:2/4/2007 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ಹೊರಡಿಸಿದೆ. ಈ ಆದೇಶ ಹೊರಡಿಸಿದ 30 ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧೀಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ
ಸಾಗರ ವಿಭಾಗ, ಸಾಗರ.

ಪಿ.ಆರ್. 650

**CENTRE FOR e-GOVERNANCE**

(Society established by the Government of Karnataka under e-Governance Secretariat, DPAR(AR) and registered under Karnataka Societies Registration Act, 1960)

Room No. 108, First Floor, M.S. Building, Bangalore-560 001

**NOTIFICATION**

**No. CEG 20 EPP 2006, 28th April 2007**

**Sub:** Empanelment of licensed certifying authority for issuance Digital Certificates to the contractors and supplier community for e-Procurement project of Government of Karnataka.

Government of Karnataka through its implementing agency Centre for e-Governance is implementing Single unified e-Procurement platform in Karnataka. In order to implement the project, M/s HP India Sales Pvt. Ltd., have been awarded the contract vide G.O. No. DPAR 26 EGV 203 dated 5th July 2006.

As a first step six pilot departments have been chosen to do a pilot implementation on end-to-end e-Procurement consisting of various modules, such as supplier registration, indent management, e-tendering, e-auctions, contract management, catalogue management. To ensure that the transactions handled through the platform are secure and authenticated, e-procurement platform will be PKI enabled.

Accordingly, it has been decided that all contractors and supplier community participating and using the e-Procurement platform should identify themselves register using digital signatures and bid also using digital signatures, so as to ensure non-repudiation, confidentiality and integrity of their data. (Similarly, the Government users will also have to use digital signatures) However, separate procedures will be prescribed for Government users to procure from Government certified agencies. As a first step, in order to facilitate contractor and supplier community, the process of empanelling licensed certifying authorities for issue of digital certificate was initiated by GoK by seeking their technical and commercial responses to all certifying authorities. The following certifying authorities responded and have submitted their technical and commercial responses.

1) TCS Limited
2) (n) Code Solutions Limited
3) Safescrypt Limited and
4) MTNL

The remaining agencies such as IRDBT, NIC and Central Excise did not respond. A Technical Scrutiny Committee constituted for this purposes has evaluated the technical responses and have found them technically suitable and accordingly the above four agencies have been technically qualified.

The commercial offer submitted by the above agencies has been evaluated by the committee and it is confirmed that the price quoted by them are reasonable considering the price published by the above agency on their website and the support requirements stated by the Government. Accordingly, it has been decided to publish these rates to facilitate contractors and suppliers for obtaining digital certificates. The contractor's community is advised to procure digital certificates required to be used on the e-Procurement platform only through these agencies. It is further clarified that the rates indicated are only for the guidance and that contractors should not pay more than what is mentioned on Government's website and also they may bargain for less. They are free to choose any of the 4 certifying agency for buying their digital certificate. Price list is at **Annexure-1** indicated level 1, level 2, and level 3 support.

The certificate that shall be obtained by the contractor's community shall be only CLASS (III) certificates.

As per IT Act 2000, the CLASS (III) certificates are to be issued to individuals as well as organizations as these are high assurance certificate primarily intended for e-commerce applications. It may be noted these certificates will be issued to individuals only on their personal (physical) appearance before the certifying authorities.

**G.SATHYAVATHI**
Chief Executive Officer
Centre for e-Governance

**ANNEXURE-1**

**Comparitive Statement of the Financial Quotes Submitted by the Empanelled Bidders for Provision of Class-III Certificates**

**Price in (Rs.) for Level 1 Support**

| S.no. | Description | Unit | TCS Limited | | Safe Scrypt Limited | | (n) Code Solutions | | MTNL | |
|---|---|---|---|---|---|---|---|---|---|---|
| | | | Price incl. of tax (INR) | Support charges | Price incl. of tax (INR) | Support charges | Price incl. of tax (INR) | Support charges | Price incl. of tax (INR) | Support charges |
| **1. Cost of Certificate Inclusive of Media for Certificate Issued to Authorized Persons of Suppliers/Contractor Organizations** | | | | | | | | | | |
| | | | | | | | | | | |
| 1.1 | New Certificate Validity Period: 1 year | 1 | 3125 | Nil | 3040 | - | 2990 | - | 2000 | - |
| 1.2 | Renewal of Certificate Validity Period: 1 year | 1 | 2245 | Nil | 2365 | - | 1150 | - | 1200 | - |
| 1.3 | New Certificate Validity Period: 2 years | 1 | 4808 | Nil | 4040 | - | 3990 | - | 2500 | - |
| 1.4 | Renewal of Certificate Validity Period: 2 years | 1 | 3928 | Nil | 3065 | - | 1500 | - | 1700 | - |
| | | | | | | | | | | |
| **2. Cost of Certificate Inclusive of Media for Certificate Issued to Individual Suppliers/Contractors** | | | | | | | | | | |
| | | | | | | | | | | |
| 2.1 | New Certificate Validity Period: 1 year | 1 | 3125 | Nil | 2290 | - | 2540 | - | 2000 | - |
| 2.2 | Renewal of Certificate Validity Period: 1 year | 1 | 2245 | Nil | 1840 | - | 850 | - | 1200 | - |
| 2.3 | New Certificate Validity Period: 2 years | 1 | 4808 | Nil | 3290 | - | 2990 | - | 2500 | - |
| 2.4 | Renewal of Certificate Validity Period: 2 years | 1 | 3928 | Nil | 2590 | - | 1200 | - | 1700 | - |

**G.SATHYAVATHI**
Chief Executive Officer
Centre for e-Governance

| Comparitive Statement of the Financial Quotes Submitted by the Empanelled Bidders for Provision of Class-III Certificates | | | | | | | | | | |
|---|---|---|---|---|---|---|---|---|---|---|
| **Price in (Rs.) for Level 2 Support** | | | | | | | | | | |
| S.no. | Description | Unit | TCS Limited | | Safe Scrypt Limited | | (n) Code Solutions | | MTNL | |
| | | | Price incl. of tax (INR) | Support charges | Price incl. of tax (INR) | Support charges | Price incl. of tax (INR) | Support charges | Price incl. of tax (INR) | Support charges |
| **1. Cost of Certificate Inclusive of Media for Certificate Issued to Authorized Persons of Suppliers/Contractor Organizations** | | | | | | | | | | |
| | | | | | | | | | | |
| 1.1 | New Certificate Validity Period: 1 year | 1 | 3125 | Rs. 250 per visit | 3040 | - | 3140 | - | 2500 | - |
| 1.2 | Renewal of Certificate Validity Period: 1 year | 1 | 2245 | Rs. 250 per visit | 2365 | - | 1300 | - | 1700 | - |
| 1.3 | New Certificate Validity Period: 2 years | 1 | 4808 | Rs. 250 per visit | 4040 | - | 4290 | - | 3000 | - |
| 1.4 | Renewal of Certificate Validity Period: 2 years | 1 | 3928 | Rs. 250 per visit | 3065 | - | 1650 | - | 2200 | - |
| | | | | | | | | | | |
| **2. Cost of Certificate Inclusive of Media for Certificate Issued to Individual Suppliers/Contractors** | | | | | | | | | | |
| | | | | | | | | | | |
| 2.1 | New Certificate Validity Period: 1 year | 1 | 3125 | Rs. 250 per visit | 2290 | - | 2690 | - | 2500 | - |
| 2.2 | Renewal of Certificate Validity Period: 1 year | 1 | 2245 | Rs. 250 per visit | 1840 | - | 1000 | - | 1700 | - |
| 2.3 | New Certificate Validity Period: 2 years | 1 | 4808 | Rs. 250 per visit | 3290 | - | 3290 | - | 3000 | - |
| 2.4 | Renewal of Certificate Validity Period: 2 years | 1 | 3928 | Rs. 250 per visit | 2590 | - | 1350 | - | 2200 | - |

**G.SATHYAVATHI**
Chief Executive Officer
Centre for e-Governance

| Comparitive Statement of the Financial Quotes Submitted by the Empanelled Bidders for Provision of Class-III Certificates | | | | | | | | | | | |
|---|---|---|---|---|---|---|---|---|---|---|---|
| Price in (Rs.) for Level 3 Support | | | | | | | | | | | |
| S.no. | Description | Unit | TCS Limited | | Safe Scrypt Limited | | (n) Code Solutions | | MTNL | | |
| | | | Price incl. of tax (INR) | Support charges | Price incl. of tax (INR) | Support charges | Price incl. of tax (INR) | Support charges | Price incl. of tax (INR) | Support charges | |
| 1. Cost of Certificate Inclusive of Media for Certificate Issued to Authorized Persons of Suppliers/Contractor Organizations | | | | | | | | | | | |
| | | | | | | | | | | | |
| 1.1 | New Certificate Validity Period: 1 year | 1 | 3125 | Rs. 500 per visit | 3040 | - | 3840 | - | 3000 | - | |
| 1.2 | Renewal of Certificate Validity Period: 1 year | 1 | 2245 | Rs. 500 per visit | 2365 | - | 1850 | - | 2200 | - | |
| 1.3 | New Certificate Validity Period: 2 years | 1 | 4808 | Rs. 500 per visit | 4040 | - | 4990 | - | 3500 | - | |
| 1.4 | Renewal of Certificate Validity Period: 2 years | 1 | 3928 | Rs. 500 per visit | 3065 | - | 2000 | - | 2700 | - | |
| | | | | | | | | | | | |
| 2. Cost of Certificate Inclusive of Media for Certificate Issued to Individual Suppliers/Contractors | | | | | | | | | | | |
| | | | | | | | | | | | |
| 2.1 | New Certificate Validity Period: 1 year | 1 | 3125 | Rs. 500 per visit | 2290 | - | 3390 | - | 3000 | - | |
| 2.2 | Renewal of Certificate Validity Period: 1 year | 1 | 2245 | Rs. 500 per visit | 1840 | - | 1550 | - | 2200 | - | |
| 2.3 | New Certificate Validity Period: 2 years | 1 | 4808 | Rs. 500 per visit | 3290 | - | 3990 | - | 3500 | - | |
| 2.4 | Renewal of Certificate Validity Period: 2 years | 1 | 3928 | Rs. 500 per visit | 2590 | - | 1700 | - | 2700 | - | |

P.R. 572

**G.SATHYAVATHI**
Chief Executive Officer
Centre for e-Governance

**ಪ್ರಾದೇಶಿಕಾ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡಾವಳಿ:**

**ಹಾಜರಿ :** ಶ್ರೀ ಕೆ. ಅಶೋಕ,
ಪ್ರಾದೇಶಿಕಾ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು

**ವಿಷಯ :** ಎಂವೈಎಕ್ಸ್:3279 (ಮೋಟಾರ್ ಕಾರ್) ಇದರ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** ವಾಹನ ಮಾಲೀಕರು ಶ್ರೀಮತಿ ಶಾರದ ಬಿ.ಆರ್. ಇವರು ನೀಡಿದ ಅರ್ಜಿ ದಿನಾಂಕ:15.2.07

ವಾಹನ ಸಂ:ಎಂವೈಎಕ್ಸ್:3279 ಮೋಟಾರ್ ಕಾರ್‌ನ್ನ ನೊಂದಾಯಿತ ಮಾಲೀಕರಾದ ಶ್ರೀಮತಿ ಬಿ.ಆರ್. ಶಾರದ ಇವರು ಸದರಿ ವಾಹನದ ತೆರಿಗೆಯನ್ನು ಜೀವಾವಧಿ ವರೆಗೆ ಪಾವತಿಸಿದ್ದು, ದಿನಾಂಕ:15.2.2007 ರಂದು ಕಛೇರಿಗೆ ಸದರಿ ವಾಃನದ ಎಲ್ಲಾ ದಾಖಲೆ ಗಳೊಂದಿಗೆ ಅರ್ಜಿ ನೀಡಿ ಈ ವಾಹನವು ಈಗ ಹಳೆಯದಾಗಿದ್ದು, ರಸ್ತೆಯಲ್ಲಿ ಓಡಿಸಲು ಅನರ್ಹವಾಗಿರುವುದರಿಂದ ಹಾಗೂ ದುರಸ್ಥಿ ದುಬಾರಿ ಆಗಿರುವುದರಿಂದ ನೋಂದಣಿ ರದ್ದುಪಡಿಸ ಬೇಕೆಂದು ಕೋರಿಕೆ ಸಲ್ಲಿಸಿರುತ್ತಾರೆ. ಮಾಲೀಕರ ಕೋರಿಕೆಯಂತೆ ಈ ವಾಹನದ ನೊಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

**ಸಂ:ಪ್ರಾಸಾಅ:ಚಿಮ:ಸಾರಿಗೆ:06–07 ದಿನಾಂಕ:19ನೇ ಫೆಬ್ರವರಿ 2007**

ಕೇಂದ್ರ ಮೋಟಾರು ವಾಹನ ಕಾಯಿದೆ 1988ರ ಕಲಂ55 ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಕೆ. ಅಶೋಕ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ ಆದ ನಾನು ವಾಹನ ಸಂ:ಎಂವೈಎಕ್ಸ್:3279 ವಾಃನದ ನೊಂದಣಿ ಹಾಗೂ ನೊಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಲೇಬೇಕಾದ ಬಾಕಿ ಏನಾದರು ಕಂಡುಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ಧರಿರುತ್ತಾರೆಂಬ ಷರತ್ತಿನ ಮೇಲೆ ನೊಂದಣಿಯನ್ನು ರದ್ದುಪಡಿಸಿರುತ್ತೇನೆ.

ವಾಹನದ ವಿವರಗಳು:

| | | |
|---|---|---|
| 1) | ವಾಹನ ಸಂಖ್ಯೆ | ಎಂವೈಎಕ್ಸ್:3279 |
| 2) | ವರ್ಗ | ಮೋಟಾರ್ ಕಾರ್ |
| 3) | ಜಾಸಿಸ್ ನಂ | 37841 |
| 4) | ಇಂಜಿನ್ ನಂ | 45 34560 |
| 5) | ಮಾಡೆಲ್ | 1952 |
| 6) | ಹೆಚ್.ಪಿ.ಎ | ಇರುವುದಿಲ್ಲ |
| 7) | ಮಾಲೀಕರು | ಶ್ರೀಮತಿ ಶಾರದ |

**ಕೆ. ಅಶೋಕ**
ಪ್ರಾದೇಶಿಕಾ ಸಾರಿಗೆ ಅಧಿಕಾರಿಗಳು ಹಾಗೂ
ನೊಂದಣಿ ಪ್ರಾಧಿಕಾರ ಚಿಕ್ಕಮಗಳೂರು

ಪಿ.ಆರ್. 670

**ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿಗಳ ಕಛೇರಿ ಬೀದರ**

**ಪ್ರಕಟಣೆ**

**ಸಂ;ಬಿಸಿಎಂ/ಕಾಪತಭ/ಸಿಆರ್–7/2007–2008 ದಿನಾಂಕ 19ನೇ ಮೇ 2007**

2007–2008ನೇ ಸಾಲಿನ ಬೀದರ ಜಿಲ್ಲೆಯಲ್ಲಿ ಕಾನೂನು ಪದವಿ ಪಡೆದಿರುವ 4 ಹಿಂದುಳಿದ ವರ್ಗಗಳ ಹಾಗೂ 3 ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಸರಕಾರಿ ವಕೀಲ ಅಥವಾ 20 ವರ್ಷಗಳಿಗಿಂತ ಹೆಚ್ಚಿನ ಅನುಭವ ಉಳ್ಳ ವಕೀಲರಿಂದ ತರಬೇತಿ ಕೊಡಿಸಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ. ತರಬೇತಿಯ ಅವಧಿಯು 4 ವರ್ಷಗಳಿದ್ದು ತರಬೇತಿ ಅವಧಿಯಲ್ಲಿ ಮಾಸಿಕ ರೂ. 1000/– ತರಬೇತಿ ಭತ್ಯೆ ನೀಡಲಾಗುವುದು. ಅರ್ಜಿಗಳನ್ನು ಸಲ್ಲಿಸಬಯಸುವವರು ಈ ಕೆಳಕಂಡ ಷರತ್ತುಗಳನ್ನು ಪೂರೈಸಿರಬೇಕು.

1) ಅಭ್ಯರ್ಥಿಯು ಹಿಂದುಳಿದ ವರ್ಗಗಳ ಪ್ರವರ್ಗ 1, 2ಎ, 3ಎ,3ಬಿ, ಹಾಗೂ ಮತೀಯ ಅಲ್ಪ ಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧ, ಶಿಖ ಹಾಗೂ ಪಾರ್ಸಿ ಸಮುದಾಯಗಳಲ್ಲಿ ಯಾವುದಾದರೊಂದು ಸಮುದಾಯಕ್ಕೆ ಸೇರಿದ್ದು ಬೀದರ ಜಿಲ್ಲೆಯ ನಿವಾಸಿಯಾಗಿರಬೇಕು.

2) ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯ ರೂ. 15000/– ಕ್ಕೆ ಮೀರಿರಬಾರದು. ಪ್ರವರ್ಗ–1 ರಡಿಯಲ್ಲಿ ಬರುವ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಆದಾಯದ ಮಿತಿ ಇರುವುದಿಲ್ಲ.

3) ಅಭ್ಯರ್ಥಿಯು ಬಾರ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

4) ಅರ್ಜಿ ಸಲ್ಲಿಸಲು ನಿಗದಿ ಪಡಿಸಿದ ಕಡೆಯ ದಿನಾಂಕಕ್ಕೆ ಪ್ರವರ್ಗ 2ಎ, 3ಎ, ಮತ್ತು 3ಬಿ ಹಾಗೂ ಅಲ್ಪಸಂಖ್ಯಾತರ ಅಭ್ಯರ್ಥಿಯ ವಯಸ್ಸು 30ಕ್ಕೆ ಹಾಗೂ ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳ ವಯಸ್ಸು 31ಕ್ಕೆ ಮೀರಿರಬಾರದು. ಮತ್ತು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕಕ್ಕೆ ಅಭ್ಯರ್ಥಿಯು 2 ವರ್ಷಗಳ ಅವಧಿಯೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

5) ಪ್ರವರ್ಗ–1ರ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

ಕಾರಣ ಅರ್ಹ ಅಭ್ಯರ್ಥಿಗಳು ಅರ್ಜಿ ನಮೂನೆಗಳನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಪಡೆದು ಕೆಳಕಂಡ ದಾಖಲೆಗಳೊಂದಿಗೆ ಜಿಲ್ಲಾ ಅಧಿಕಾರಿಗಳು ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಬಸವನಗರ ಬೀದರ ಇವರಿಗೆ ಈ ಪ್ರಕಟಣೆಯು ಕರ್ನಾಟಕ ಗೆಜೆಟ್ ನಲ್ಲಿ ಪ್ರಕಟಣೆಯಾದ ದಿನಾಂಕದಿಂದ 30 ದಿನಗಳೊಳಗೆ ತಲುಪುವಂತೆ ಸಲ್ಲಿಸುವುದು.

1) ಕಾನೂನು ಪದವಿ ಪರೀಕ್ಷೆಯ ಎಲ್ಲಾ ವರ್ಷಗಳ ಧೃಢೀಕೃತ ಅಂಕ ಪಟ್ಟಿ.
2) ಸಂಬಂಧ ಪಟ್ಟ ತಹಶೀಲ್ದಾರರಿಂದ ನೀಡಲ್ಪಟ್ಟ ಜಾತಿ ಆದಾಯ ಪ್ರಮಾಣ ಪತ್ರ.
3) ವಾಸಸ್ಥಳ ಪ್ರಮಾಣ ಪತ್ರ.
4) ಬಾರ ಕೌನ್ಸಿಲ್ ನಲ್ಲಿ ಹೆಸರನ್ನು ನೋಂದಾಯಿಸಿದ ಪ್ರಮಾಣ ಪತ್ರ.

ಅಪೂರ್ಣವಾದ ಹಾಗೂ ಅವಧಿ ಮೀರಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಹೆಚ್ಚಿನ ಮಾಹಿತಿಗಾಗಿ ಈ ಕೆಳಗೆ ಸಹಿ ಮಾಡಿದವರನ್ನು ಕಛೇರಿ ಸಮಯದಲ್ಲಿ ಸಂಪರ್ಕಿಸಬಹುದು.

ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ
ಅಧಿಕಾರಿಗಳು, ಬೀದರ

ಪಿ.ಆರ್. 679

**GOVERNMENT OF KARNATAKA**

**DIRECTORATE OF ECONOMICS AND STATISTICS BANGALORE-1**

**Consumer Price Index Numbers of Industrial Workers.**

**No.DES 23 PWX2006 Dated 18th May 2007**

**State: Karnataka Base:1987-88=100 Month:February 2007 Date: 18-5-2007**

| | Group/Sub-Group | Bellary | Bhad-ra-vathl | Da-van gere | Dan deli | Gul-Barga | Hari-har | Has-San | Man dya | Man galore | Ralc hur | Tum kur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I | FOOD (a) Cereals & Products | 388 | 455 | 440 | 383 | 345 | 402 | 388 | 392 | 318 | 342 | 417 |
| | (b) Pulses & Products | 340 | 425 | 433 | 453 | 339 | 412 | 437 | 458 | 427 | 393 | 417 |
| | c) Oil & fats | 260 | 289 | 259 | 292 | 258 | 280 | 281 | 296 | 229 | 278 | 293 |
| | d) Meat, Fish & Eggs | 401 | 416 | 421 | 506 | 462 | 426 | 368 | 410 | 611 | 550 | 403 |
| | e) Milk & Products | 382 | 284 | 347 | 334 | 312 | 358 | 258 | 366 | 311 | 328 | 295 |
| | f) Condiments & Spices | 299 | 461 | 401 | 435 | 387 | 353 | 396 | 383 | 331 | 362 | 405 |
| | g) Vegetables & Fruits | 292 | 324 | 459 | 441 | 325 | 336 | 360 | 440 | 325 | 262 | 368 |
| | h) Other Food | 312 | 398 | 386 | 352 | 323 | 319 | 322 | 300 | 286 | 315 | 343 |
| | FOOD GROUP INDEX | 349 | 397 | 406 | 388 | 339 | 366 | 354 | 385 | 360 | 349 | 373 |
| II | Pan Supari, Tobacco & Intoxicants | 329 | 369 | 397 | 335 | 583 | 481 | 378 | 478 | 292 | 365 | 381 |
| III | Fuel & Light | 370 | 328 | 326 | 457 | 320 | 335 | 354 | 333 | 291 | 481 | 300 |
| IV | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V | Clothing, Bedding & Footwear | 258 | 257 | 241 | 374 | 283 | 266 | 349 | 381 | 242 | 468 | 214 |
| VI | Mis cellaneous: | | | | | | | | | | | |
| | (a) Medical Care | 628 | 534 | 386 | 291 | 314 | 268 | 385 | 329 | 359 | 436 | 216 |
| | (b) Education, Recreation & Amusement | 364 | 403 | 518 | 239 | 391 | 483 | 347 | 303 | 435 | 345 | 326 |
| | c) Transport & Communication | 416 | 445 | 358 | 655 | 595 | 423 | 400 | 566 | 608 | 390 | 440 |

| | | | | | | | | | | | | |
|---|---|---|---|---|---|---|---|---|---|---|---|---|
| | d) Personal Care & effects | 289 | 278 | 258 | 269 | 283 | 252 | 304 | 301 | 277 | 260 | 268 |
| | e) Others Miscellaneous Group | 361<br>400 | 369<br>378 | 289<br>341 | 462<br>353 | 293<br>346 | 273<br>325 | 270<br>330 | 288<br>313 | 245<br>374 | 466<br>378 | 243<br>283 |
| | General Index To convert to Base 1960 Multiply by Linking Faxtor. | 322<br>7.39 | 341<br>7.19 | 338<br>8.27 | 359<br>... | 313<br>8.26 | 316<br>8.56 | 322<br>9.25 | 340<br>7.92 | 320<br>9.31 | 348<br>.... | 289<br>..... |

ಜಂಟಿ ನಿರ್ದೇಶಕರು
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು

**GOVERNMENT OF INDIA**
**MINISTRY OF LABOUR**
**LABOUR BUREAU**
**Cleremont' Date: 3rd April 2007**
**CONSUMER PRICE INDEX NUMBERS FOR INDUSTRIAL WORKERS (BASE-2001=100)**

| Group/Sub-group/Centre | Bangalore | Belgaum | JBL Dharwad | Mercara | Mysore |
|---|---|---|---|---|---|
| **A: Food** | | | | | |
| (a) Cercals & Products | 130 | 118 | 133 | 115 | 123 |
| (b) Pulses and & Products | 136 | 137 | 141 | 135 | 140 |
| (c) Oils & Fats | 164 | 162 | 154 | 158 | 147 |
| (d) Meat, Fish & Eggs | 149 | 154 | 144 | 133 | 149 |
| (e) Milk & Products | 128 | 120 | 107 | 120 | 131 |
| (f) Condiments & Spices | 159 | 133 | 139 | 142 | 153 |
| (g) Vegetables & Fruits | 133 | 143 | 133 | 134 | 151 |
| (h) Other Food | 129 | 120 | 123 | 122 | 122 |
| **FOOD GROUP** | 136 | 129 | 131 | 126 | 133 |
| Pan,Supari,Tobacco & Intoxicants | 129 | 109 | 119 | 116 | 122 |
| Fuel and Light | 145 | 146 | 131 | 103 | 147 |
| Housing Index | 129 | 114 | 125 | 104 | 120 |
| Clothing, Bedding and Footwear | 100 | 111 | 116 | 114 | 106 |
| Miscellaneous | | | | | |
| (a) Medical care | 138 | 136 | 124 | 126 | 125 |
| (b) Education, Recreation & Amusement | 132 | 133 | 125 | 130 | 112 |
| (c) Transport and Communication | 168 | 182 | 180 | 154 | 156 |
| (d) Personal Care & Effects | 127 | 116 | 121 | 116 | 118 |
| (e) Others | 116 | 110 | 116 | 114 | 135 |
| Miscellaneous Group | 142 | 136 | 135 | 128 | 129 |
| **GENERAL INDEX** | 134 | 128 | 130 | 121 | 130 |

ಜಂಟಿ ನಿರ್ದೇಶಕರು
ಪಿ.ಆರ್. 665 ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ನ್ಯಾಯಾಲಯದಲ್ಲಿ**
**ದಾವಾ ಸಂಖ್ಯೆ:ಜೆಆರ್‌ಬಿ/ಡಿಐಎಸ್/1497/2006–07**

ವಾದಿ : ಬೆಂಗಳೂರು ಜಿಲ್ಲಾ ಮತ್ತು ಬೆಂಗಳೂರು ಗ್ರಾಮಾಂತರ
ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ
ಚಾಮರಾಜಪೇಟೆ, ಬೆಂಗಳೂರು–560 018

ಪ್ರತಿವಾದಿ : ಶ್ರೀ ಸಿ ಬಸವರಾಜು
ಬಿನ್ ಲೇಟ್ ಚನ್ನೇಗೌಡ,
ಹಳ್ಳಿಮಾರನಹಳ್ಳಿ ಗಾಣಾಳು ಅಂಚೆ,
ಕನಕಪುರ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 103 (1)ರಡಿಯಲ್ಲಿ ಆದೇಶಕ್ಕಿಂತ ಪೂರ್ವದಲ್ಲಿ ಹೊರಡಿಸಿದ ಜಪ್ತಿ ಆದೇಶ**

ವಾದಿ ಸಹಕಾರ ಬ್ಯಾಂಕು ದಿನಾಂಕ 27.9.2006 ರಂದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರಡಿಯಲ್ಲಿ ದಾವಾ ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ದಾಖಲು ಮಾಡಿದ್ದಾರೆ. ಪ್ರತಿವಾದಿಯು ಸದರಿ ಬ್ಯಾಂಕಿನ ನೌಕರನಾಗಿದ್ದಾಗ ರೂ. 21,56,225-00 ಗಳ ಹಣ ದುರುಪಯೋಗ ಮಾಡಿರುವ ಬಗ್ಗೆ ಕಾಯ್ದೆ ಕಲಂ 63 ರಡಿಯಲ್ಲಿ ನಡೆಸಿದ ಶಾಸನಬದ್ದ ಲೆಕ್ಕ ಪರಿಶೋಧನಾ ವರದಿಯಲ್ಲಿ ಕಂಡು ಬಂದಿದ್ದು ಇದರನ್ವಯ ಈ ಮೇಲಿನ ದಾವಾ ಅರ್ಜಿಯನ್ನು ಪ್ರತಿವಾದಿಯವರಿಂದ ವಸೂಲಾತಿಗಾಗಿ ಸಲ್ಲಿಸಲಾಗಿದೆ.

2. ಈ ಪ್ರಕರಣದಲ್ಲಿ ಅರ್ಜಿದಾರರು ಕಾಯ್ದೆ ಕಲಂ 103 ರಡಿಯಲ್ಲಿ ಅರ್ಜಿಯೊಂದಿಗೆ ಪ್ರಮಾಣ ಪತ್ರ ಸಲ್ಲಿಸಿ ಅರ್ಜಿಯ ಷೆಡ್ಯೂಲಿನಲ್ಲಿ ನಮೂದಿಸಿರುವ ಆಸ್ತಿಗಳನ್ನು ಪ್ರತಿವಾದಿಯವರು ಹಸ್ತಾಂತರಗೊಳಿಸಲು ಪ್ರಯತ್ನಿಸುತ್ತಿದ್ದಾರೆಂದು, ಈ ಆಸ್ತಿಯನ್ನು ಆದೇಶ ಪೂರ್ವ ಜಪ್ತಿ ಮಾಡಿ ಆದೇಸ ಹೊರಡಿಸದೇ ಇದ್ದಲ್ಲಿ ಪ್ರತಿವಾದಿಯವರು ಆಸ್ತಿಯನ್ನು ಪರಭಾರೆ ಅಥವಾ ಮಾರಾಟ ಮಾಡಿದರೆ ವಾದಿ ಬ್ಯಾಮಕು ಪ್ರತಿವಾದಿ ಇವರಿಂದ ಈ ದಾವಾ ಅರ್ಜಿಯಲ್ಲಿ ವಿವರಿಸಿರುವ ಮೊತ್ತವನ್ನು ಈ ನ್ಯಾಯಾಲಯವು ನೀಡಬಹುದಾದ ಆದೇಶವನ್ನು ಅನುಸರಿಸಿ ವಸೂಲಿ ಮಾಡಲು ಪ್ರತಿವಾದಿಯವರು ಬೇರೆ ಆಸ್ತಿ ಹೊಂದಿಲ್ಲವೆಂದು. ಸರ್ಕಾರ ತಕ್ಷಣವೇ ಆದೇಶಕ್ಕಿಂತ ಪೂರ್ವದಲ್ಲಿ ಜಪ್ತಿ ಮಾಡಿ ಆದೇಶಿಸಲು ವಿನಂತಿಸಿದ್ದಾರೆ. ಈ ಅರ್ಜಿಯನ್ನು ಈ ನ್ಯಾಯಾಲಯವು ಪರಿಶೀಲಿಸಿದೆ ಮತ್ತು ಈ ಕೆಳಗಿನ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 103 ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 69 ಸಿಎಲ್ ಎಂ 2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಎ. ವೆಂಕಟೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಷೆಡ್ಯೂಲ್ ಸ್ವತ್ತುಗಳನ್ನು ತಾತ್ಕಾಲಿಕ ಆದೇಶಕ್ಕಿಂತ ಪೂರ್ವದಲ್ಲಿ ಜಪ್ತಿ ಮಾಡಿದ್ದು ಈ ಆಸ್ತಿಗಳ ಮೇಲೆ ರೂ. 21,56,225-00 ಭೋಜ ದಾಖಲಿಸಲಾಗಿದೆ. ಕಾರಣ, ಈ ಆದೇಶ ತಲುಪಿದ 20 ದಿನಗಳೊಳಗಾಗಿ ಸದರಿ ಮೊತ್ತವನ್ನು ನಗದಾಗಿ ಅಥವಾ ಯಾವುದೇ ಭೋಜರಹಿತ ಸ್ಥಿರ ಆಸ್ತಿಗಳನ್ನು ಈ ಕೆಳಗ ಸಹಿ ಮಾಡಿದ ಪ್ರಾಧಿಕಾರದ ಒಪ್ಪಿಗೆ ಆಗುವಂತೆ ಹಾಜರು ಪಡಿಸಿ ಮೇಲ್ಕಾಣಿಸಿದ ಆಸ್ತಿಯ ಮೇಲೆ ದಾಖಲಿಸಿದ ಭೋಜಾವನ್ನು ಕಡಿಮೆ ಮಾಡಿಕೊಳ್ಳಬಹುದಾಗಿದೆ. ತಪ್ಪಿದಲ್ಲಿ ತಾತ್ಕಾಲಿಕವಾಗಿ ಜಪ್ತಿಮಾಡಿ ದಾಖಲಿಸಿದ ಭೋಜಾವನ್ನು ಸ್ಥಿರಗೊಳಿಸಲಾಗುವುದೆಂದು ಈ ಮೂಲಕ ಆದೇಶಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರಗಳು**

| Sl. No | Survey No | Location | Measurement in acres |
|---|---|---|---|
| 1 | 1 | Hallimaranahalli, Kasaba Hobli, Kanakapura Taluk, Bangalore Rural District | 0.07 |
| 2 | 2/3 | -do- | 1.23 |
| 3 | 2/4 | -do- | 0.05 |
| 4 | 3/1 | -do- | 0.34 |
| 5 | 3/2 | -do- | 0.14 |
| 6 | 3/3 | -do- | 0.09 |
| 7 | 3/6 | -do- | 0.15 |
| 8 | 5/1 | -do- | 0.24 |
| 9 | 13/1 | -do- | 0.16 |
| 10 | 16/4 | -do- | 0.29 |
| 11 | 18/7 | -do- | 0.05 |
| 12 | 18/4 | -do- | 2.17 |
| 13 | 325/3 | -do- | |

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:7.10.2006 ರಂದು ನೀಡಿದ್ದೇನೆ.

**ಕೆ.ಎ. ವೆಂಕಟೇಶ್**
ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು

ಪಿ.ಆರ್. 673

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ–ಉಪ–ವಿಭಾಗ, ಮಧುಗಿರಿ ಇವರ ನ್ಯಾಯಾಲಯದ ನಡವಳಿಕೆಗಳು**

**ವಿಷಯ :** ಶಿರಾ ತಾಲ್ಲೂಕು ವ್ಯವಸಾಯ ಸೇವಾ ಸಹಕಾರ ಸಂಘ ನಿ, ದೊಡ್ಡಬಾಣಗೆರೆ, ಇದರಲ್ಲಿ ಹಣ ದುರುಪಯೋಗದ ಬಗ್ಗೆ ಶ್ರೀ ಸಿ. ಜಯರಾಮಯ್ಯ ಇವರ ಹೆಸರಿನಲ್ಲಿರುವ ಸ್ಥಿರಾಸ್ತಿ ಮತ್ತು ಠೇವಣಿ ಮತ್ತು ಅವರ ಕಾನೂನು ವಾರಸುದಾರರಾದ ಪತ್ನಿ ಶ್ರೀಮತಿ ಲಕ್ಷ್ಮದೇವಮ್ಮ, ಮಕ್ಕಳುಗಳಾದ 1) ಜಿ. ಶಿವಕುಮಾರ 2) ಜಿ. ಪರಮೇಶ್ವರ ಮತ್ತು ಮಗಳಾದ ಕು:ಜಿ. ಮಂಜುಳ ಇವರುಗಳ ಹೆಸರಿನಲ್ಲಿ ಈ ಸಂಘದಲ್ಲಿರುವ ಠೇವಣಿಗಳನ್ನು ಸಹಕಾರಿ ಕಾಯಿದೆ ಕಲಂ 103 ರ ಅಡಿಯಲ್ಲಿ ತೀರ್ಮಪೂರ್ವ ಜಪ್ತಿ ಆದೇಶ ಮಾಡುವ ಬಗೆಗೆ.

**ಉಲ್ಲೇಖ :** 1) ಕಾರ್ಯದರ್ಶಿ ವ್ಯವಸಾಯ ಸೇವಾ ಸಹಕಾರ ಸಂಘ ನಿ, ದೊಡ್ಡಬಾಣಗೆರೆ ಶಿರಾ ತಾಲ್ಲೂಕು ಇವರ ಪ್ರಸ್ತಾವೆ ಪತ್ರದ ದಿನಾಂಕ:9.5.2007 ಮತ್ತು ಮತ್ತೊಂದು ಮನವಿ ಪತ್ರದ ದಿನಾಂಕ:14.5.2007.
2) ಈ ನ್ಯಾಯಾಲಯದಲ್ಲಿ ದಾಖಲಾಗಿರುವ ಅದಿಭಾರ ಅರ್ಜಿ ಸಂಖ್ಯೆ:2:2007–08

**ಪ್ರಸ್ತಾವನೆ:**

ಶ್ರೀ ಸಿ. ಜಯರಾಮಯ್ಯ ಮಾಜಿ ಕಾರ್ಯದರ್ಶಿ ವ್ಯವಸಾಯ ಸೇವಾ ಸಹಕಾರ ಸಂಘ ನಿ, ದೊಡ್ಡಬಾಣಗೆರೆ ಶಿರಾ ತಾಲ್ಲೂಕು,. ಇವರು ಸದರಿ ಸಂಘದಲ್ಲಿ ರೂ. 3,66,491=71 ಗಳ ಹಣ ಮತ್ತು ದಾಸ್ತಾನು ದುರುಪಯೋಗ ಪಡಿಸಿರುವುದು 2004–05 ಮತ್ತು 2005–06ನೇ ಸಾಲುಗಳ ಲೆಕ್ಕ ಪರಿಶೋಧನೆ ವರದಿಗಳಲ್ಲಿ ಕಂಡು ಬಂದಿದ್ದು ಈ ಹಣದ ವಸೂಲಾತಿಗೆ ಸಂಘದ ಹಾಲಿ ಕಾರ್ಯದರ್ಶಿ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 69ರ ಅಡಿಯಲ್ಲಿ ದಾವೆ ಹೂಡಿರುತ್ತಾರೆ. ಈ ದಾವೆಯನ್ನು ದಿನಾಂಕ:9.5.2007 ರಂದು ಕಡತದ ಮೇಲೆ ದಾಖಲಿಸಿಕೊಂಡು ದಿನಾಂಕ:4.6.2007 ರಿಂದ ವಿಚಾರಣೆ ಪ್ರಾರಂಭಿಸಲು ಆರೋಪ ಸಹಿತದ ನೋಟೀಸನ್ನು ರವಾನಿಸಿರುತ್ತದೆ. ಅರ್ಜಿದಾರ ಸಂಘವು ಉಲ್ಲೇಖ ಪತ್ರದಲ್ಲಿ ಮನವಿ ಮಾಡಿ ಶ್ರೀ ಸಿ. ಜಯರಾಮಯ್ಯ ಇವರು ದುರುಪಯೋಗ ಪಡಿಸಿದ ಹಣ ರೂ. 3,66,491=71 ಗಳ ವಸೂಲಿ ಕುರಿತು ಹಣದ ಭದ್ರತೆಗಾಗಿ ದಾವೆಯ ಅಂತಿಮ ಫಲಿತಾಂಶವನ್ನು ಕಾಯ್ದಿರಿಸಿ ಸದರಿಯವರ ಹೆಸರಿನಲ್ಲಿರುವ ಸ್ಥಿರಾಸ್ತಿ ಮತ್ತು ಈ ಸಂಘದಲ್ಲಿರುವ ಠೇವಣಿ ಮತ್ತು ಅವರ ಹಕ್ಕು ಬದ್ಧ ಕಾನೂನು ವಾರಸುದಾರರ ಹೆಸರಿನಲ್ಲಿ ಇದೇ ಸಂಘದಲ್ಲಿರುವ ಠೇವಣಿ ಮೊಬಲಗುಗಳನ್ನು ಸಹಕಾರಿ ಕಾಯಿದೆ ಕಲಂ 103 ರ ಅಡಿಯಲ್ಲಿ ತೀರ್ಮ ಪೂರ್ವ ಜಪ್ತಿ ಆದೇಶ ನೀಡಬೇಕಾಗಿಕೋರಿರುತ್ತಾರೆ. ಆದುದರಿಂದ ಈ ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುವ ಅದಿಭಾರ ಅರ್ಜಿ ಸಂಖ್ಯೆ 2:2007–08 ರಲ್ಲಿ ಅಂತಿಮ ತೀರ್ಮ ಕಾಯ್ದಿರಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ರ ಅನ್ವಯ ಈ ನ್ಯಾಯಾಲಯದ ದಾವೆಯ ತೀಮ ಪೂರ್ವ ಷೆಡ್ಯುಲ್ ಆಸ್ತಿಯನ್ನು ಮತ್ತು ಠೇವಣಿಗಳನ್ನು ಜಪ್ತಿ ಮಾಡಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಜಪ್ತಿ ಆದೇಶ:**

**ನಂಸ.ಸಂ.ಸ.ನಿ 33:ಎಬಿಎನ್:ಡಿಎಸ್:14:2007–08 ದಿನಾಂಕ:15ನೇ ಮೇ 2007**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ರ ಅನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಕ್ರಮಾಂಕ ಸಿ.ಎಂ.ಡಬ್ಲ್ಯೂ: 69: ಸಿ.ಎಲ್.ಎಂ. 2001 ದಿನಾಂಕ:21.11.2001 ರ ರೀತ್ಯಾ ಪ್ರದತ್ತವಾದ ಅಧಿಕಾರದ ರೀತಿ ಶ್ರೀ ಹೆಚ್.ಡಿ. ಶಿವಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ–ಉಪ–ವಿಭಾಗ ಮಧುಗಿರಿ ಆದ ನಾನು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಸಿ. ಜಯರಾಮಯ್ಯ ಮಾಜಿ ಕಾರ್ಯದರ್ಶಿ ವ್ಯವಸಾಯ ಸೇವಾ ಸಹಕಾರ ಸಂಘ ನಿ, ದೊಡ್ಡಬಾಣಗೆರೆ ಶಿರಾ ತಾಲ್ಲೂಕು ಇವರ ಹೆಸರಿನಲ್ಲಿರುವ ಸ್ಥಿರಾಸ್ತಿ ಮತ್ತು ವಾದಿ ಸಂಘದಲ್ಲಿ ಅವರ ಹೆಸರಿನಲ್ಲಿರುವ ಠೇವಣಿ ಮತ್ತು ಅವರ ಕಾನೂನು ಬದ್ಧ ವಾರಸುದಾರರಾದ ಹೆಂಡತಿ ಹಾಗೂ ಮಕ್ಕಳ ಹೆಸರಿನಲ್ಲಿ ವಾದಿ ಸಂಘದಲ್ಲಿರುವ ಠೇವಣಾತಿಗಳನ್ನು ಈ ನ್ಯಾಯಾಲಯದಲ್ಲಿ ವಿಚಾರಣೆಗಾಗಿ ಇರುವ ಈ ದಾವೆಯ ಅಂತಿಮ ತೀರ್ಪಿಗೆ ಒಳಪಟ್ಟು ಈ ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಿರುತ್ತೇನೆ.

ಶ್ರೀ ಸಿ. ಜಯರಾಮಯ್ಯ ಇವರ ಹೆಸರಿನಲ್ಲಿರುವ ಸ್ಥಿರಾಸ್ತಿ ಮತ್ತು ಠೇವಣಿ ಹಾಗೂ ಮೇಲೆ ಹೇಳಿರುವ

ಅವರ ಹಕ್ಕು ಬದ್ದ ಕಾನೂನು ವಾರಸುದಾರರ ಹೆಸರಿನಲ್ಲಿರುವ ಠೇವಣಾತಿಗಳನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೆ ಅಥವಾ ಸ್ವತ್ತಿಗೆ ತತ್ಸಮಾನವಾದ ನಗದು ಭದ್ರತೆ ನೀಡುವ ವರೆಗೆ ವಿಲೇವಾರಿ ಮಾಡುವುದೇ

ಆಗಲೀ, ಪರಭಾರೆ ಮಾಡುವುದಾಗಲೀ ಅಥವಾ ವರ್ಗಾಯಿಸುವುದೇ ಆಗಲೀ ಮಾಡುವಂತಿಲ್ಲ. ಒಂದು ವೇಳೆ ಈ ಆದೇಶವನ್ನು ನಿರ್ಲಕ್ಷಿಸಿ ಮಾರಾಟ ಮಾಡಿದರೂ ಈ ಸ್ವತ್ತುಗಳನ್ನು ಖರೀದಿಸಿದಲ್ಲಿ, ಪರಭಾರೆ ಮಾಡಿದಲ್ಲಿ ಅಥವಾ ಇನ್ನಾವುದೇ ವಿಧದಲ್ಲಿ ವರ್ಗಾಯಿಸಿಕೊಂಡಲ್ಲಿ ಅದು ಸಾಧುವಾಗುವುದಿಲ್ಲ ಎಂದು ಈ ಮೂಲಕ ಸಾರ್ವಜನಿಕ ಗಮನಕ್ಕೆ ತರಲಾಗಿದೆ.

ದುರುಪಯೋಗದಾರರು ಮತ್ತು ಕಾನೂನು ವಾರಸುದಾರರು ಈ ಜಪ್ತಿ ಆದೇಶದ ವ್ಯಾಪ್ತಿಯಿಂದ ಹೊರಬರಲು ಇಚ್ಚಿಸಿದಲ್ಲಿ ಜಪ್ತಿಗೊಳಿಸಲ್ಪಟ್ಟ ಆಸ್ತಿ ಮತ್ತು ಠೇವಣಾತಿಗಳ ಮೌಲ್ಯಕ್ಕೆ ತಕ್ಕಷ್ಟು ಮತ್ತು ಈ ನ್ಯಾಯಾಲಯವು ಸರಿ ಎಂದು ಭಾವಿಸುವ ತಕ್ಕಷ್ಟು ನಗದುಭದ್ರತೆಯನ್ನು ಸಹಕಾರಿ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ–ಉಪ–ವಿಭಾಗ ಮಧುಗಿರಿ ಇವರ ಹೆಸರಿನಲ್ಲಿ ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ ಮಧುಗಿರಿ ಶಾಖೆ ಮಧುಗಿರಿ ಈ ಬ್ಯಾಂಕಿನಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ಮೂಲ ಚಲನ್ ಪ್ರತಿಯನ್ನು ದಿನಾಂಕ;18.6.2007 ರಂದು ಅಥವಾ ಅದಕ್ಕಿಂತ ಮುಂಚೆ ಈ ನ್ಯಾಯಾಲಯಕ್ಕೆ ಹಾಜರ್ ಪಡಿಸುವುದರ ಮೂಲಕ ಈ ಜಪ್ತಿ ಆದೇಶದಿಂದ ಹೊರಗುಳಿಯ ಬಹುದೆಂದು ಸಹ ತಿಳಿಸಲಾಗಿದೆ. ಸದರಿ ನಿಗದಿತ ಅವಧಿಯೊಳಗೆ ನಗದು ಭದ್ರತೆ ನೀಡಲು ವ್ಯಾಜ್ಯದ ಎದುರು ಅರ್ಜಿದಾರರು ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತಿ ಆದೇಶ ಸ್ಥಿರಗೊಳ್ಳುವುದಲ್ಲದೆ ಖಾಯಂಗೊಳ್ಳುವುದು ಎಂದು ತಿಳಿಯತಕ್ಕದ್ದು.

**ಷೆಡ್ಯೂಲ್ ಸ್ವತ್ತುಗಳು:**

| ಕ್ರ.ಸಂ | ಖಾತೆದಾರರ ಹಕ್ಕುದಾರರ ಹೆಸರು ಮತ್ತು ವಿಳಾಸ | ಖಾತೆ ನಂ | ಸರ್ವೆ ನಂ | ವಿಸ್ತೀರ್ಣ | ತರಹೆ | ಚಕ್ಕು ಬಂದಿ |
|---|---|---|---|---|---|---|
| 1 | ಸಿ. ಜಯರಾಮಯ್ಯ ಬಿನ್ ಸಿದ್ದಮ್ಮ ಚಿಕ್ಕ ಬಾಣಗೆರೆ ಹುಲಿ ಕುಂಟೆ ಹೋಬಳಿ ಶಿರಾ ತಾಲ್ಲೂಕು ವಾಸ ಸ್ಥಾನ ಶೆಟ್ಟಿಗೊಂಡನಹಳ್ಳಿ | 318 | 77/2 | 4.00 ಎಕರೆ | ಖುಷ್ಕಿ | ಪೂರ್ವಕ್ಕೆ: ಹಾಲೇಗೌಡ ಪಶ್ಚಿಮಕ್ಕೆ: ತಿಪ್ಪೇಸ್ವಾಮಿ ಮತ್ತು ಬಸಪ್ಪ ಉತ್ತರಕ್ಕೆ: ಕೆ.ಆರ್. ರಂಗನಾಥಪ್ಪ ದಕ್ಷಿಣಕ್ಕೆ: ಜಿ. ತಿಮ್ಮಯ್ಯ |

ಈ ಸಂಘದಲ್ಲಿರುವ ಠೇವಣಾತಿಗಳು: ಸಂಘದ ದಿನಾಂಕ: 31.3.2006ರ ಆಸ್ತಿ ಜವಾಬ್ದಾರಿ ತಃಖ್ತೆ ಪ್ರಕಾರ ಇರುವವು:

| ಕ್ರ.ಸಂ | ಹೆಸರು | ಮೊಬಲಗು |
|---|---|---|
| 1 | ಸಿ. ಜಯರಾಮಯ್ಯ ಕಾರ್ಯದರ್ಶಿ ಡಿಪಾಸಿಟ್ | ರೂ. 106083=97 |
| 2 | ಶ್ರೀಮತಿ ಲಕ್ಷ್ಮೀದೇವಮ್ಮ ಆಲಿಯಾಸ್ ಲಕ್ಷ್ಮೀದೇವಿ | ರೂ. 137016=00 |
| 3 | ಶಿವಕುಮಾರ್ ಡಿಪಾಸಿಟ್ | ರೂ. 63600=00 |
| 4 | ಜಿ. ಪರಮೇಶ್ವರ ಡಿಪಾಸಿಟ್ | ರೂ. 40600=00 |
| 5 | ಮಂಜುಳ ಡಿಪಾಸಿಟ್ | ರೂ. 25000=00 |
| | ಜುಮ್ಲಾ | ರೂ. 372299=97 (ಠೇವಣಾತಿಗಳು) |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರದ ಸಹಿ ಹಾಗೂ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ: 15.5.2007 ರಂದು ನೀಡಿರುತ್ತೇನೆ.

**ಹೆಚ್.ಡಿ. ಶಿವಣ್ಣ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಮಧುಗಿರಿ–ಉಪ–ವಿಭಾಗ ಮಧುಗಿರಿ

ಪಿ.ಆರ್. 671

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ

**ಸಂ:ಡಬ್ಲ್ಯೂಸಿಎ:ಸಿಆರ್:58:07 ದಿನಾಂಕ:11ನೇ ಮೇ 2007**

**ಅರ್ಜಿದಾರರು:**

1. ಅಬ್ದುಲ್ ರಜಾಕ್ ಬಿನ್ ಮಖ್ದೂಮ್ ಸಾಬ್
2. ಹಾಫಿಜಾ ಬಿ ಕೋಂ ಅಬ್ದುಲ್ ರಜಾಕ್
3. ಜರೀನಾ ಬೀ ಬಿನ್ ಅಬ್ದುಲ್ ರಜಾಕ್
4. ಅಮ್ರಾನ್ ಬಿನ್ ಅಬ್ದುಲ್ ರಜಾಕ್

ಇವರೆಲ್ಲರ ವಾಸ:
ಜಟ್ ಪಟ್ ನಗರ, ಸೋಳೇಬೈಲು ಶಿವಮೊಗ್ಗ

**ವಿರುದ್ಧ**

**ಪ್ರತಿವಾದಿಗಳು:**

1. ಕೆ. ಮಣಿ ಬಿನ್ ಕೇಶವಪ್ಪ, ಲಾರಿಮಾಲೀಕರು ವಾಸ:ಶರಾವತಿನಗರ ಚರ್ಚ್ ಎದುರು ಶಿವಮೊಗ್ಗ ನಗರ.
2. ದಿ ನ್ಯೂ ಇಂಡಿಯಾ ಅಸೂರೆನ್ಸ್ ಕಂ. ಲಿ ಶಿವಮೊಗ್ಗ

## ಅಧಿಸೂಚನೆ

ಅರ್ಜಿದಾರರಾದ ಅಬ್ದುಲ್ ರಜಾಕ್ ಮತ್ತು ಇತರೆ ಮೂರು ಜನರು ಇವರು ತಮ್ಮ ಮಗ ಮತ್ತು ಸಹೋದರ ಅಕ್ಬರ್ ಇವರು ಒಂದನೇ ಪ್ರತಿವಾದಿಗಳಾದ ಕೆ. ಮಣಿ ಬಿನ್ ಕೇಶವಪ್ಪ ಲಾರಿ ಮಾಲೀಕರು ಶರವಾತಿನಗರ ಶಿವಮೊಗ್ಗ ಇವರಲ್ಲಿ ಕ್ಲೀನರ್ ಕೆಲಸಗಾರರಾಗಿದ್ದ, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:15.2.07 ರಂದು ಸಂಭವಿಸಿದ ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿ ಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

ಎಸ್. ವಿಜಯ್ ಕುಮಾರ್
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ
ಆಯುಕ್ತರು, ಶಿವಮೊಗ್ಗ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ

**ಸಂ:ಡಬ್ಲ್ಯೂಸಿಎ:ಸಿಆರ್:59:07 (F) ದಿನಾಂಕ:11ನೇ ಮೇ 2007**

**ಅರ್ಜಿದಾರರು:**
1. ಬಾಬೀ ಯಾನ್ ಬೇಬಿ ಕೋಂ ಲೇಟ್ ಪ್ರಭಾಕರ ಶೆಟ್ಟಿ
ವಾಸ: ಹುಂಚದ ಕಟ್ಟೆ ಗ್ರಾಮ, ತೀರ್ಥಹಳ್ಳಿ ತಾ:
2. ಸುಬ್ರಹ್ಮಣ್ಯ ಬಿನ್ ಲೇಟ್ ಪ್ರಭಾಕರ ಶೆಟ್ಟಿ
3. ಸುಧೀರ್ ಬಿನ್ ಲೇಟ್ ಪ್ರಭಾಕರ ಶೆಟ್ಟಿ
4. ಗಿರಿಜಮ್ಮ ಕೋಂ ಲೇಟ್ ಸುಂದರ ಶೆಟ್ಟಿ
ಇವರೆಲ್ಲರ ವಾಸ: ಹುಂಚದ ಕಟ್ಟೆಗ್ರಾಮ
ತೀರ್ಥಹಳ್ಳಿ ತಾ:

**ವಿರುದ್ಧ**

**ಪ್ರತಿವಾದಿಗಳು:**
1. ಬಿ.ಎಲ್. ಲಿಂಗಪ್ಪ ಬಿನ್ ಲೋಕಪ್ಪ ಗೌಡ ಬೆನವಳ್ಳಿ ಗ್ರಾಮ ಹೊಸನಗರ ತಾ:
2. ಶಾಕಾ ಪ್ರಬಂಧಕರು ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ ಜೆ.ಸಿ. ರಸ್ತೆ ಸಾಗರ.

## ಅಧಿಸೂಚನೆ

ಅರ್ಜಿದಾರರಾದ ಬಾಬಿ ಯೂನ್ ಬೇಬಿ ಮತ್ತು ಇತರೆ ಮೂರು ಜನರು ಇವರು ತಮ್ಮ ಪತಿ ತಂದೆ ಮಗನಾದ ಮೃತ ಪ್ರಭಾಕರಶೆಟ್ಟಿ ಇವರು ಒಂದನೇ ಪ್ರತಿವಾದಿಗಳಾದ ಬಿ.ಎಲ್. ಲಿಂಗಪ್ಪ ಬಿನ್ ಲೋಕಪ್ಪ ಗೌಡ ಬೆನವಳ್ಳಿ ಗ್ರಾಮ ಹೊಸನಗರ ತಾ: ಇವರಲ್ಲಿ ಕೂಲಿ ಕೆಲಸಗಾರರಾಗಿದ್ದ, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:08.7.05 ರಂದು ಸಂಭವಿಸಿದ ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿ ಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್ ಕುಮಾರ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ
ಆಯುಕ್ತರು, ಶಿವಮೊಗ್ಗ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ

**ಸಂ:ಡಬ್ಲ್ಯೂಸಿಎ:ಸಿಆರ್:57:07 (ಎಫ್) ದಿನಾಂಕ:11ನೇ ಮೇ 2007**

**ಅರ್ಜಿದಾರರು:**
1. ರೇಣುಕಾಬಾಯಿ ಕೋಂ ದಿ: ಗಂಗನಾಯ್ಕ
2. ಶಿಲ್ಪ ಬಿನ್ ದಿ:ಗಂಗನಾಯ್ಕ
3. ಪುನಿತ್ ಬಿನ್ ದಿ:ಗಂಗನಾಯ್ಕ್
4. ಮಾಲ್ತೇಶ್ ಬಿನ್ ದಿ: ಗಂಗನಾಯ್ಕ್
ಇವರೆಲ್ಲರ ವಾಸ: ಕೊರಟೆಗೆರೆ ತಾಳಗುಂದ ಹೋಬಳಿ ಶಿಕಾರಿಪುರ ತಾ:

**ವಿರುದ್ಧ**

**ಪ್ರತಿವಾದಿಗಳು:**
1. ಸಯದ್ ಬಿನ್ ಫೈರೋಜ್ ಅಹ್ಮದ್ ಗುತ್ತಿಗೆದಾರರು ವಾಸ: ಬಾಳೆಹೊನ್ನೂರು ಬಾಳೆಹೊನ್ನೂರು– ಅಂಚೆ ನರಸಿಂಹರಾಜಪುರ ತಾ:
2. ಕಾರ್ಯದರ್ಶಿಗಳು, ಬಿ ಕಣಬೂರು ಗ್ರಾಮ ಪಂಚಾಯ್ತಿ ನರಸಿಂಹರಾಜಪುರ ತಾ:
3. ಕಾರ್ಯನಿರ್ವಾಹಣಾಧಿಕಾರಿ, ಜಿಲ್ಲಾ ಪಂಚಾಯತ್ ಚಿಕ್ಕಮಗಳೂರು

### ಅಧಿಸೂಚನೆ

ಅರ್ಜಿದಾರರಾದ ರೇಣುಕಾಬಾಯಿ ಮತ್ತು ಇತರೆ ಮೂರು ಜನ ಇವರು ತಮ್ಮ ಪತಿ ಮತ್ತು ತಂದೆಯಾದ ದಿ: ಗಂಗನಾಯ್ಕ್ ಇವರು ಒಂದನೇ ಪ್ರತಿವಾದಿಗಳಾದ ಸಯದ್ ಫೈರೋಜ್ ಗುತ್ತಿಗೆ ದಾರರು ಬಾಳೆಹೊನ್ನೂರು ಇವರಲ್ಲಿ ಕೂಲಿ ಕೆಲಸಗಾರರಾಗಿದ್ದ, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:15.3.06 ರಂದು ಸಂಭವಿಸಿದ ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್ ಕುಮಾರ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು, ಶಿವಮೊಗ್ಗ.

ಪಿ.ಆರ್. 669

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಕಾಅಗ/ಕಾನಪ/ಎಫ್–72/07 139 ದಿನಾಂಕ:11ನೇ ಮೇ 2007**

**ಅರ್ಜಿದಾರರು:**
1. ಶ್ರೀಮತಿ ಬೀಬಿಜಾನ್ W/o ಅಲ್ಲಾಸಾಬ ನಾಯಕವಾಡಿ LIG ಮನೆ ನಂ. 217, ಹುಡ್ಕೋ ಕಾಲೋನಿ ಗದಗ
2. ಶ್ರೀ ಬಾಬುಸಾಬ್ S/o ಅಲ್ಲಾಸಾಬ್ ನಾಯಕವಾಡಿ, LIG ಮನೆ ನಂ:217, ಹುಡ್ಕೋ ಕಾಲೋನಿ ಗದಗ

**ವಿರುದ್ಧ**

**ಪ್ರತಿವಾದಿಗಳು:**
1. ಶ್ರೀ ಸಂಜೀವಪ್ಪ S/o ಚಿಕ್ಕಪ್ಪ ಕಾಂಬ್ಳಿ, ಮಾಲಿಕರು ಟ್ರ್ಯಾಕ್ಟರ್ ಟ್ರೇಲರ್ KA-25/T-6153, R/o ಭದ್ರಾಪುರ ನವಲಗುಂದ ತಾ: ಧಾರವಾಡ ಜಿ:
2. ದಿ ಡಿವಿಜನಲ್ ಮೇನೇಜರ್ ದಿ ನ್ಯಾಷನಲ್ ಇನ್ ಶ್ಯೂರೆನ್ಸ್ ಕಂ.ಲಿ. ಸುಜಾತ ಕಾಂಪ್ಲೆಕ್ಸ್ ಪಿ.ಬಿ,. ರಸ್ತೆ ಹುಬ್ಬಳ್ಳಿ

### ಅಧಿಸೂಚನೆ

ಅರ್ಜಿದಾರರಾದ ಶ್ರೀಮತಿ :ಬೀಬಿಜಾನ್ W/o ಅಲ್ಲಾಸಾಬ ನಾಯಕವಾಡಿ LIG ಮನೆ ನಂ:217 ಹುಡ್ಕೋ ಕಾಲೋನಿ ಗದಗ & ಶ್ರೀ ಬಾಬುಸಾಬ್ S/o ಅಲ್ಲಾಸಾಬ್ ನಾಯಕವಾಡಿ LIG ಮನೆ ನಂ:217 ಹುಡ್ಕೋ ಕಾಲೋನಿ ಗದಗ ಇವರು ತಾವು ಮೃತ ಅಲ್ಲಾಸಾಬ ಇಮಾಮಸಾನ ನಾಯಕವಾಡಿ ಇವರ ಹೆಂಡತಿ ಮತ್ತು ಮಗ ಎಂದೂ ಅವರ ಮರಣದಿಮದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯ ದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಅಲ್ಲಾಸಾಬ ಇಮಾಮಸಾಬ ನಾಯಕವಾಡಿ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಸಂಜೀವಪ್ಪ S/o ಚಿಕ್ಕಪ್ಪ ಕಾಂಬ್ಳಿ R/o ಭದ್ರಾಪುರ ನವಲಗುಂದ ತಾ: ಧಾರವಾಡ ಜಿಲ್ಲೆ ಇವರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರು ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಕಾನೂನು ಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲಿ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ
ಗದಗ ಜಿಲ್ಲೆ ಗದಗ ಹಾಗೂ ಕಾರ್ಮಿಕ ನಷ್ಠ ಕಾನೂನು ಅಡಿ ಆಯುಕ್ತರು,

ಪಿ.ಆರ್. 654